KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯ ಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಫೆಬ್ರವರಿ ೨೨, ೨೦೦೭ (ಫಾಲ್ಗುಣ ೩ ಶಕವರ್ಷ ೧೯೨೮) | ಸಂಚಿಕೆ ೮ |
|---|---|---|

## ಭಾಗ - ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಕಾರಾಗೃಹಗಳ ಇಲಾಖಾ ನೇಮಕಾತಿ ಸಮಿತಿ, ಬೆಂಗಳೂರು**

**ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರ ಕಛೇರಿ**

**ನಂ.4, ಶೇಷಾದ್ರಿ ರಸ್ತೆ, ಗಾಂಧಿನಗರ, ಬೆಂಗಳೂರು-560 009**

**ಅಧಿಸೂಚನೆ**

**ಸಂಖ್ಯೆ:ಇ4/ಸಿಆರ್ 60/ 2007, ದಿನಾಂಕ:19ನೇ ಫೆಬ್ರವರಿ, 2007**

**ವಿಷಯ:** ಜೈಲರ್ ಮತ್ತು ವಾರ್ಡರ್ ಹುದ್ದೆಗಳಿಗೆ ಅರ್ಹತೆ ಆಧಾರದ ಮೇಲೆ ಆಯ್ಕೆ ಮಾಡುವ ಕುರಿತು.

1) ಕಾರಾಗೃಹಗಳ ಇಲಾಖೆಯಲ್ಲಿ ಜೈಲರ್/ವಾರ್ಡರ್ ಹುದ್ದೆಗಳ ನೇಮಕಾತಿಗಾಗಿ ಕರ್ನಾಟಕ ಕಾರಾಗೃಹಗಳ ಸೇವೆಗಳು (ನೇಮಕಾತಿ) ನಿಯಮಗಳು 2002ರ ಅನುಸಾರ ಮಹಿಳಾ ಮತ್ತು ಪುರುಷ ಅಭ್ಯರ್ಥಿಗಳಿಂದ ಇಲಾಖೆಯಿಂದ ನಿಗದಿಪಡಿಸಿದ ನಮೂನೆಯಲ್ಲಿಯೇ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿಯ ಶುಲ್ಕ ರೂ 50/- (ಐವತ್ತು ರೂಪಾಯಿಗಳು) ಮಾತ್ರ. ಅರ್ಜಿಗಳನ್ನು ದಿನಾಂಕ:01.03.2007 ರಿಂದ 10.03.2007 ರವರೆಗೆ ಬೆಳಗ್ಗೆ 10.00ರಿಂದ ಸಾಯಂಕಾಲ 5.00 ಗಂಟೆಯವರೆಗೆ ಎಲ್ಲಾ ಕೆಲಸದ ದಿನಗಳಂದು ಈ ಕೆಳಗೆ ನಮೂದಿಸಿರುವ ಕಛೇರಿಗಳಲ್ಲಿ ಮಾರಾಟ ಮಾಡಲಾಗುವುದು.

1. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರ ಕಛೇರಿ, ನಂ.4, ಶೇಷಾದ್ರಿ ರಸ್ತೆ, ಗಾಂಧೀನಗರ, ಬೆಂಗಳೂರು-560 009,
2. ಉಪಮಹಾನಿರೀಕ್ಷಕರು, ಕೇಂದ್ರ ಕಾರಾಗೃಹ, ಪರಪ್ಪನ ಅಗ್ರಹಾರ, ಬೆಂಗಳೂರು-560 100,
3. ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಮೈಸೂರು- 570 007,
4. ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಹಿಂಡಲಗಾ, ಬೆಳಗಾವಿ - 591 108,
5. ಅಧೀಕ್ಷಕರು, ಕೇಂದ್ರ ಕಾರಾಗೃಹ, ಗುಲ್ಬರ್ಗಾ- 585 102,
6. ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಬಳ್ಳಾರಿ - 583 103,
7. ಅಧೀಕ್ಷಕರು, ಕೇಂದ್ರ ಕಾರಾಗೃಹ, ಬಿಜಾಪುರ- 586 107,
8. ಅಧೀಕ್ಷಕರು, ಬಾಲಾಪರಾಧಿ ಶಾಲೆ, ಧಾರವಾಡ - 580 008,
9. ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಬೀದರ್ - 585 401,
10. ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಶಿವಮೊಗ್ಗ - 577 201,
11. ಅಧೀಕ್ಷಕರು, ಜಿಲ್ಲಾ ಕಾರಾಗೃಹ, ರಾಯಚೂರು - 584 101,

12. ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಮಂಗಳೂರು - 575 003,
13. ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಮಡಿಕೇರಿ - 571 201,
14. ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಕಾರವಾರ - 581 301,
15. ಅಧೀಕ್ಷಕರು, ಜಿಲ್ಲಾ ಉಪ ಕಾರಾಗೃಹ, ಕೋಲಾರ - 563 101,
16. ಅಧೀಕ್ಷಕರು, ಜಿಲ್ಲಾ ಕಾರಾಗೃಹ, ತುಮಕೂರು - 572 101,
17. ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಚಿತ್ರದುರ್ಗ - 577 501,
18. ಅಧೀಕ್ಷಕರು, ಜಿಲ್ಲಾ ಉಪ ಕಾರಾಗೃಹ, ಹಾಸನ - 573 201,
19. ಅಧೀಕ್ಷಕರು, ಜಿಲ್ಲಾ ಉಪ ಕಾರಾಗೃಹ, ಮಂಡ್ಯ - 571 401,
20. ಅಧೀಕ್ಷಕರು, ಜಿಲ್ಲಾ ಉಪ ಕಾರಾಗೃಹ, ಚಿಕ್ಕಮಗಳೂರು - 577 101,
21. ಅಧೀಕ್ಷಕರು, ವಿಶೇಷ ಉಪ ಕಾರಾಗೃಹ, ದಾವಣಗೆರೆ - 577 001,
22. ಅಧೀಕ್ಷಕರು, ಜಿಲ್ಲಾ ಕಾರಾಗೃಹ, ಚಾಮರಾಜನಗರ - 571 313.

2) ಭರ್ತಿ ಮಾಡಿದ ಅರ್ಜಿಗಳನ್ನು ಅಭ್ಯರ್ಥಿಗಳು ಸ್ವತಃ / ನೊಂದಾಯಿತ ಅಂಚೆಯ ಮೂಲಕ ದಿನಾಂಕಃ 24.03.2007 ರಂದು ಸಾಯಂಕಾಲ 5.00 ಗಂಟೆಯೊಳಗೆ ಅಥವಾ ಅದಕ್ಕಿಂತ ಮುಂಚಿತವಾಗಿ **ಸದಸ್ಯ ಕಾರ್ಯದರ್ಶಿಗಳು, ಕಾರಾಗೃಹಗಳ ಇಲಾಖಾ ನೇಮಕಾತಿ ಸಮಿತಿ, ನಂ.4, ಶೇಷಾದ್ರಿ ರಸ್ತೆ, ಗಾಂಧೀನಗರ, ಬೆಂಗಳೂರು-9** ರವರಿಗೆ ಸಲ್ಲಿಸಬೇಕು.

3) ಈ ಕೆಳಗೆ ನಮೂದಿಸಿರುವ ಖಾಲಿ ಹುದ್ದೆಗಳ ಸಂಖ್ಯೆ ತಾತ್ಕಾಲಿಕವಾಗಿದ್ದು ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಮುನ್ಸೂಚನೆಯಿಲ್ಲದೆ ಬದಲಾವಣೆಗೊಳಪಟ್ಟಿರುತ್ತದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ವೇತನ ಶ್ರೇಣಿ | ಖಾಲಿ ಹುದ್ದೆಗಳ ಸಂಖ್ಯೆ |
|---|---|---|---|
| 1 | ಜೈಲರ್ | ರೂ.4575-125-5700-150-7200-200-8400 | 11 |
| 2 | ವಾರ್ಡರ್ | ರೂ. 3000-75-3450-100-4450-125-5450 | 260 |
| | | ಒಟ್ಟುಃ | **271** |

**ಸೂಚನೆಃ** ಜೈಲರ್ / ವಾರ್ಡರ್ ಎರಡೂ ಹುದ್ದೆಗಳಿಗೆ ಅರ್ಜಿ ಸಲ್ಲಿಸಲಿಚ್ಛಿಸುವ ಅಭ್ಯರ್ಥಿಗಳು ಪ್ರತಿ ಹುದ್ದೆಗೆ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸತಕ್ಕದ್ದು.

4) ಜೈಲರ್ ಮತ್ತು ವಾರ್ಡರ್ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ.

1) ಜೈಲರ್ ಃ

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಮಹಿಳಾ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 5 | 2 | | | 1 | 2 |
| ಪರಿಶಿಷ್ಟ ಜಾತಿ | 2 | 1 | | | | 1 |
| ಪರಿಶಿಷ್ಟ ಪಂಗಡ | | | | | | |
| ಪ್ರವರ್ಗ- 1 | | | | | | |
| ಪ್ರವರ್ಗ - 2ಎ | 2 | 1 | | | | 1 |
| ಪ್ರವರ್ಗ - 2ಬಿ | 1 | | | | | 1 |
| ಪ್ರವರ್ಗ - 3ಎ | 1 | | | | | 1 |
| ಪ್ರವರ್ಗ - 3ಬಿ | | | | | | |
| **ಒಟ್ಟು** | **11** | **4** | | | **1** | **6** |

**2) ವಾರ್ಡರ್ ಃ**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಕನ್ನಡ ಮಾಧ್ಯಮ ವ್ಯಾಸಂಗ ಮಾಡಿದ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಇತರರು |
|---|---|---|---|---|---|---|---|
| ಸಾಮಾನ್ಯ ವರ್ಗ | 130 | 6 | 39 | 13 | 6 | 33 | 33 |
| ಪರಿಶಿಷ್ಟ ಜಾತಿ | 39 | 2 | 12 | 3 | 2 | 10 | 10 |

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಕನ್ನಡ ಮಾಧ್ಯಮ ವ್ಯಾಸಂಗ ಮಾಡಿದ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಇತರರು |
|---|---|---|---|---|---|---|---|
| ಪರಿಶಿಷ್ಟ ಪಂಗಡ | 8 | | 3 | | | 2 | 3 |
| ಪ್ರವರ್ಗ- 1 | 10 | | 3 | 1 | | 3 | 3 |
| ಪ್ರವರ್ಗ - 2ಎ | 40 | 2 | 12 | 4 | 2 | 10 | 10 |
| ಪ್ರವರ್ಗ - 2ಬಿ | 10 | | 3 | 1 | | 3 | 3 |
| ಪ್ರವರ್ಗ - 3ಎ | 10 | | 3 | 1 | | 3 | 3 |
| ಪ್ರವರ್ಗ - 3ಬಿ | 13 | | 4 | 1 | | 4 | 4 |
| **ಒಟ್ಟು** | **260** | **10** | **79** | **24** | **10** | **68** | **69** |

5) ಕನ್ನಡ ಮಾಧ್ಯಮ, ಮಾಜಿ ಸೈನಿಕರು, ಯೋಜನೆಗಳಿಂದ ನಿರಾಶ್ರಿತಗೊಂಡ, ಗ್ರಾಮೀಣ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಈ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿದ ಪ್ರವರ್ಗದ ಇತರ ಅಭ್ಯರ್ಥಿಗಳಿಂದ ತುಂಬಲಾಗುವುದು ಹಾಗೂ ಮಹಿಳಾ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಆ ಖಾಲಿ ಹುದ್ದೆಗಳನ್ನು ಆಯಾ ವರ್ಗಕ್ಕೆ ಸೇರಿದ ಪುರುಷ ಅಭ್ಯರ್ಥಿಗಳಿಂದ ತುಂಬಲಾಗುವುದು.

6) ಈ ಆಯ್ಕೆ ನೇಮಕಾತಿಯು ಕರ್ನಾಟಕ ಕಾರಾಗೃಹಗಳ ಸೇವೆಗಳು (ನೇಮಕಾತಿ) ನಿಯಮಗಳು 2002, ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ಮೇರೆಗೆ ಆಯಾ ಹುದ್ದೆಗೆ ಅನುಗುಣವಾಗಿ ಅನುಸರಿಸಲಾಗುವುದು.

7) **ವಯೋಮಿತಿಃ ಜೈಲರ್ / ವಾರ್ಡರ್ ಹುದ್ದೆಗೆಃ**

ಅರ್ಜಿ ಸಲ್ಲಿಸಲು ನಿಗಧಿಪಡಿಸಲಾದ ಕೊನೆಯ ದಿನಾಂಕದಂದು (ಅಂದರೆ ದಿಃ 24.03.2007ಕ್ಕೆ) ಅಭ್ಯರ್ಥಿಗೆ ಕನಿಷ್ಟ 20 ವರ್ಷ ವಯಸ್ಸಾಗಿರಬೇಕು ಮತ್ತು ಗರಿಷ್ಟ ವಯೋಮಿತಿ 1) GM -24 ವರ್ಷಗಳು 2) ವರ್ಗ I, 2A, 2B, 3A, 3B, SC & STಗೆ 26 ವರ್ಷಗಳು ಮತ್ತು (ಮಾಜಿ ಸೈನಿಕ ಅಭ್ಯರ್ಥಿಯು ಸೈನ್ಯ ವಿಯೋಜನೆ, ಸೇವೆಯಿಂದ ತೆಗೆದು ಹಾಕಿದ ಹಾಗೂ ಸೇವಾ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ ಅವರಿಗೆ ಅವರು ಸೇವೆ ಸಲ್ಲಿಸಿದ ಅವಧಿಯಷ್ಟು ಸಡಿಲಿಕೆ ಅಥವಾ ಅವರಿಗೆ 38 ವರ್ಷ ವಯಸ್ಸಾಗುವವರೆಗೆ ಯಾವುದು ಕನಿಷ್ಟವೋ ಅಲ್ಲಿಯವರೆಗೆ).

8) **ವಿದ್ಯಾರ್ಹತೆಃ**

ಅ) ಜೈಲರ್ ಹುದ್ದೆಗೆ ಃ ಜೈಲರ್ ಹುದ್ದೆಗೆ ಬ್ಯಾಚುಲರ್ ಪದವಿಯನ್ನು ಹೊಂದಿರತಕ್ಕದ್ದು ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರತಕ್ಕದ್ದು. ಸೋಶಿಯಾಲಜಿ ಅಥವಾ ಸೈಕಾಲಜಿ ಅಥವಾ ಕ್ರಿಮಿನಾಲಜಿ ಅಥವಾ ಕರೆಕ್ಷನಲ್ ಅಡ್ಮಿನಿಸ್ಟ್ರೇಷನ್‌ನಲ್ಲಿ ಬ್ಯಾಚುಲರ್ ಪದವಿ ಪಡೆದವರಿಗೆ ಆದ್ಯತೆ ನೀಡಲಾಗುವುದು.

ಆ) ವಾರ್ಡರ್ ಹುದ್ದೆಗೆ:ವಾರ್ಡರ್ ಹುದ್ದೆಗೆ S.S.L.C./ 10ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು.

**9) ಲಿಖಿತ ಪರೀಕ್ಷೆಃ**

ಅ) ಜೈಲರ್ ಹುದ್ದೆಗೆ ಸಂಬಂಧಿಸಿದಂತೆ ಕನ್ನಡ ಅಥವಾ ಆಂಗ್ಲ ಭಾಷೆಯಲ್ಲಿ 100 ಅಂಕಗಳಿಗೆ ವಸ್ತುನಿಷ್ಟ (Objective) ಮಾದರಿಯಾದ ಬಹುವಿಧ ಆಯ್ಕೆಯ (Multiple choice) ಪ್ರಶ್ನೆಗಳಿದ್ದು ಇವು ಸಾಮಾನ್ಯ ಜ್ಞಾನ, ವಿಜ್ಞಾನ, ಭೂಗೋಳ, ಇತಿಹಾಸ, ಸಂವಿಧಾನ, ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿ ಇತ್ಯಾದಿ ವಿಷಯಗಳಲ್ಲಿ ಲಿಖಿತ ಪರೀಕ್ಷೆಯಾಗಿರುತ್ತದೆ. ಈ ಪರೀಕ್ಷೆಯ ಅವಧಿ ಒಂದೂವರೆ ಗಂಟೆಯದ್ದಾಗಿರುತ್ತದೆ.

ಆ) ವಾರ್ಡರ್ ಹುದ್ದೆಗೆ ಸಂಬಂಧಿಸಿದಂತೆ ಕನ್ನಡ / ಆಂಗ್ಲ ಭಾಷೆಯಲ್ಲಿ 100 ಅಂಕಗಳಿಗೆ ವಸ್ತುನಿಷ್ಟ (Objective) ಮಾದರಿಯಾದ ಬಹುವಿಧ ಆಯ್ಕೆಯ (Multiple choice) ಪ್ರಶ್ನೆಗಳ ಲಿಖಿತ ಪರೀಕ್ಷೆಯಾಗಿರುತ್ತದೆ. ಈ ಪರೀಕ್ಷೆಯ ಅವಧಿ ಒಂದೂವರೆ ಗಂಟೆಯದ್ದಾಗಿರುತ್ತದೆ.

ಇ) ಜೈಲರ್ ಮತ್ತು ವಾರ್ಡರ್ ಹುದ್ದೆಗಳಿಗೆ ಪರೀಕ್ಷೆಗಳನ್ನು ಬೇರೆ ಬೇರೆ ಸಮಯದಲ್ಲಿ ಈ ಕೆಳಕಂಡ ಸ್ಥಳಗಳಲ್ಲಿ ನಡೆಸಲಾಗುವುದು. ಅಭ್ಯರ್ಥಿಗಳು ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಮತ್ತು ಅವರು ಅರ್ಹತಾ (qualifying) ಪರೀಕ್ಷೆಯಲ್ಲಿ ಪಡೆದ ಶೇಕಡಾ ಅಂಕಗಳನ್ನೂ ಕೂಡಿ ಅದರ ಆಧಾರದ ಮೇಲೆ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ತಯಾರಿಸಲಾಗುವುದು. ಈ ಅರ್ಹ ಅಭ್ಯರ್ಥಿಗಳ ಪಟ್ಟಿಯಿಂದ ಪ್ರತಿ ವರ್ಗದಲ್ಲಿ 1 ಃ 5ರ ಪ್ರಮಾಣದಲ್ಲಿ ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಅಭ್ಯರ್ಥಿಗಳನ್ನು ಕರೆಯಲಾಗುವುದು.

1) ಬೆಂಗಳೂರು, 2) ಬೆಳಗಾವಿ, 3) ಮೈಸೂರು, 4) ಗುಲ್ಬರ್ಗಾ, 5) ಬಳ್ಳಾರಿ ಮತ್ತು 6) ಬಿಜಾಪುರ

10) **ದೇಹದಾರ್ಢ್ಯತೆ ಃ**

ಜೈಲರ್ / ವಾರ್ಡರ್ ಹುದ್ದೆಗಳಿಗೆ ಸಂಬಂಧಿಸಿದಂತೆ ಈ ಕೆಳಗಿನ ದೇಹದಾರ್ಢ್ಯತೆ ಹೊಂದಿದವರು ಮಾತ್ರ ಅರ್ಜಿ ಸಲ್ಲಿಸಬೇಕು.

| | **ಪುರುಷ ಅಭ್ಯರ್ಥಿಗಳಿಗೆ** | **ಮಹಿಳಾ ಅಭ್ಯರ್ಥಿಗಳಿಗೆ** |
|---|---|---|
| ಎತ್ತರ | 168 ಸೆಂ.ಮೀ. | 157 ಸೆಂ.ಮೀ. |
| ಎದೆ ಸುತ್ತಳತೆ | ಪೂರ್ಣ ಉಸಿರೆಳೆದಾಗ ಎದೆಯ ಸುತ್ತಳತೆ ಕನಿಷ್ಟ 86 ಸೆ.ಮಿ.ಗಳಷ್ಟಿದ್ದು ಕನಿಷ್ಟ 5 ಸೆ.ಮಿ.ಗಳಷ್ಟು ವಿಸ್ತರಣೆ ಹೊಂದಿರಬೇಕು. | ಅನ್ವಯಿಸುವುದಿಲ್ಲ. |
| ತೂಕ | ಅನ್ವಯಿಸುವುದಿಲ್ಲ. | 49 ಕೆ.ಜಿ. |

| | |
|---|---|
| ದೃಷ್ಟಿ | ಉತ್ತಮ ಕನಿಷ್ಠ<br>1. ದೂರದೃಷ್ಟಿ 6/9 ಅಥವಾ 6/9<br>6/9 6/12<br>2. ಸಮೀಪ ದೃಷ್ಟಿ 0/6 0/8<br>ಪ್ರತಿ ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಲೇಬೇಕು. ವರ್ಣಾಂಧತೆ, ಮೆಳ್ಳಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು. |
| ಶ್ರವಣ ಶಕ್ತಿ | (1) ರಿನ್ನೇಸ್ ಪರೀಕ್ಷೆ (2) ವೆಬ್ಬರ್ಸ್ ಪರೀಕ್ಷೆ (3) ವರ್ಟಿಗೋ ಪರೀಕ್ಷೆ<br>ಮೇಲಿನ ಪರೀಕ್ಷೆಗಳಲ್ಲಿ ಯಾವುದೇ ನ್ಯೂನತೆಗಳು ಕಂಡುಬಂದಲ್ಲಿ ಅನರ್ಹತೆ ಎಂದು ಪರಿಗಣಿಸಲಾಗುವುದು. |

**ಕೆಳಕಂಡವುಗಳು ದೈಹಿಕ ಅನರ್ಹತೆಗಳಾಗಿರುತ್ತವೆಃ**

(1) ತಾಗುಮಂಡಿ (Knock-knees), (2) ಬಾಗಿದ ಕಾಲುಗಳು (Bow legs), (3) ಚಪ್ಪಟೆ ಪಾದ (Flat feet),

(4) ಅಪಧಮನಿ ಊತ (varicose veins), (5) ಮಾತಿನಲ್ಲಿ ಅಡಚಣೆ (ಗುಕ್ಕಿಸುವುದು) (Speech impediment).

**ದೈಹಿಕ ಸಾಮರ್ಥ್ಯ ಪರೀಕ್ಷೆಃ**

ಈ ಕೆಳಕಂಡ ಸಾಮರ್ಥ್ಯ ಪರೀಕ್ಷೆಯನ್ನು ನಡೆಸಲಾಗುವುದು.

ಪುರುಷ ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ

| ಅಂಶಗಳು | ಅರ್ಹತಾ ವೇಳೆ / ದೂರ |
|---|---|
| 100 ಮೀಟರು ಓಟ | 15 ಸೆಕೆಂಡುಗಳು |
| ಎತ್ತರ ಜಿಗಿತ (High jump) | 1.20 ಮೀಟರು |
| ಉದ್ದ ಜಿಗಿತ (Long jump) | 3.80 ಮೀಟರು |
| ಗುಂಡೆಸೆತ (7.26 ಕಿಲೋ) (Shot put) | 5.60 ಮೀಟರು |
| 800 ಮೀಟರ್ ಓಟ | 2 ನಿಮಿಷ 50 ಸೆಕೆಂಡುಗಳು |

**ಮಹಿಳಾ ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ**

| ಅಂಶಗಳು | ಅರ್ಹತಾ ವೇಳೆ / ದೂರ |
|---|---|
| 100 ಮೀಟರು ಓಟ | 18.5 ಸೆಕೆಂಡುಗಳು |
| ಎತ್ತರ ಜಿಗಿತ (High jump) | 0.90 ಮೀಟರು |
| ಉದ್ದ ಜಿಗಿತ (Long jump) | 2.50 ಮೀಟರು |
| ಗುಂಡೆಸೆತ (3.63 ಕಿಲೋ) (Shot put) | 3.75 ಮೀಟರು |
| 200 ಮೀಟರ್ ಓಟ | 40 ಸೆಕೆಂಡುಗಳು |

ಅಭ್ಯರ್ಥಿಗಳು ಮೇಲಿನ 5 ದೈಹಿಕ ಸಾಮರ್ಥ್ಯ ಪರೀಕ್ಷೆಗಳ ಪೈಕಿ ಕನಿಷ್ಠ 3ರಲ್ಲಿ ಉತ್ತೀರ್ಣರಾಗಬೇಕು. ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಅಂಕಗಳನ್ನು ನೀಡಲಾಗುವುದಿಲ್ಲ. ಇವು ಕೇವಲ ಅರ್ಹತೆಗೆ ಮಾತ್ರ ಸೀಮಿತವಾಗಿರುತ್ತದೆ. ದೈಹಿಕ ಸಾಮರ್ಥ್ಯ ಪರೀಕ್ಷೆ ಮುಗಿದ ನಂತರ ನಿಗದಿತ ನಮೂನೆಗೆ ಅಭ್ಯರ್ಥಿಯು ಸಹಿ ಹಾಕಲೇಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳು ಅನರ್ಹತೆಗೊಳಗಾಗುವರು.

**ಟಿಪ್ಪಣಿಃ** ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಯನ್ನು ಒಂದು ಸಮಿತಿಯು ನಡೆಸುವುದು. ಯಾವುದೇ ವೈದ್ಯಕೀಯ ಪ್ರಮಾಣಪತ್ರದ ಆಧಾರದ ಮೇಲೆ ಪರಿಗಣಿಸಲಾಗುವುದಿಲ್ಲ. ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆ ಪೂರ್ಣಗೊಂಡ ನಂತರ ಸಂಬಂಧಪಟ್ಟ ದಾಖಲೆಗೆ ಅಭ್ಯರ್ಥಿಗಳು ತಮ್ಮ ಸಹಿ ಹಾಕಬೇಕು. ಇಲ್ಲದಿದ್ದಲ್ಲಿ ಅಂತಹವರನ್ನು ಅನರ್ಹರೆಂದು ಪರಿಗಣಿಸಲಾಗುವುದು.

**11) ಮೌಖಿಕ ಪರೀಕ್ಷೆಃ**

ದೈಹಿಕ ಸಾಮರ್ಥ್ಯ ಪರೀಕ್ಷೆಯಲ್ಲಿ ತೇರ್ಗಡೆಯಾದ ಜೈಲರ್ ಹುದ್ದೆಯ ಅಭ್ಯರ್ಥಿಗಳಿಗೆ 1 :3 ಪ್ರಮಾಣದಲ್ಲಿ 20 ಅಂಕಗಳ ಮೌಖಿಕ ಸಂದರ್ಶನ ನಡೆಸಲಾಗುವುದು. ಅರ್ಹ ಅಭ್ಯರ್ಥಿಗಳು ನೇಮಕಾತಿ ಸಮಿತಿಯ ಮುಂದೆ ಸಂದರ್ಶನಕ್ಕೆ ಹಾಜರಾಗಬೇಕಾಗುವುದು. ಈ ಮೌಖಿಕ ಪರೀಕ್ಷೆಯಲ್ಲಿ ಕನಿಷ್ಠ ಅಂಕಗಳು ಇರುವುದಿಲ್ಲ. ಅಭ್ಯರ್ಥಿಗಳು ಎಲ್ಲಾ ಮೂಲ ದಾಖಲಾತಿಗಳನ್ನು ಮೌಖಿಕ ಪರೀಕ್ಷೆ ಪ್ರಾರಂಭವಾಗುವ ಮುನ್ನ ಹಾಜರುಪಡಿಸಬೇಕು.

**12) ಲಗತ್ತುಗಳುಃ**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳ ಪ್ರತಿಗಳನ್ನು ತಪ್ಪದೇ ಅರ್ಜಿ- ಭಾಗ - 2 ಕ್ಕೆ ಲಗತ್ತಿಸಿ ರೂ.200/-ಗಳನ್ನು **ಸದಸ್ಯ ಕಾರ್ಯದರ್ಶಿಗಳು, ಕಾರಾಗೃಹಗಳ ಇಲಾಖಾ ನೇಮಕಾತಿ ಸಮಿತಿ, ಬೆಂಗಳೂರು ಇವರಿಗೆ ಸಂದಾಯ ಮಾಡಿದ ಕ್ರಾಸ್ಡ್ ಡಿಮ್ಯಾಂಡ್ ಡ್ರಾಪ್ಟ್‌ನೊಂದಿಗೆ ಲಗತ್ತಿಸಬೇಕು.** ತಪ್ಪಿದಲ್ಲಿ ಅಂತಹ ಅರ್ಜಿಗಳನ್ನು ಯಾವುದೇ ಪತ್ರ ವ್ಯವಹಾರವಿಲ್ಲದೆ ತಿರಸ್ಕರಿಸಲಾಗುವುದು. ಈ ಡಿ.ಡಿ. ಹಣವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

1) ಜನ್ಮ ದಿನಾಂಕವನ್ನೊಳಗೊಂಡ ಎಸ್.ಎಸ್.ಎಲ್.ಸಿ./ಎಸ್.ಎಸ್.ಸಿ.ಪರೀಕ್ಷೆಗಳ ಅಂಕಪಟ್ಟಿ/ ವರ್ಗಾವಣೆ ಪತ್ರ.

2) ಪದವಿ ಪರೀಕ್ಷೆಯ ಅಂಕಪಟ್ಟಿ/ ಪದವಿ ಪ್ರಮಾಣ ಪತ್ರ.

3) ಸರ್ಕಾರಿ ಇಲಾಖೆಯಲ್ಲಿ / ರಾಜ್ಯ ಸರ್ಕಾರದ / ಕೇಂದ್ರ ಸರ್ಕಾರದ / ಸರ್ಕಾರದ ಯಾವುದೇ ಪ್ರಾಧಿಕಾರದಲ್ಲಿ / ರಾಜ್ಯ ಅಥವಾ ಕೇಂದ್ರ ಸರ್ಕಾರದ ಸಾರ್ವಜನಿಕ ಸ್ವಾಮ್ಯದ ಕಂಪನಿಗಳಲ್ಲಿ ಪ್ರಸ್ತುತ ಉದ್ಯೋಗಿಯಾಗಿದ್ದಲ್ಲಿ ಅಂತಹವರು ಇಲಾಖಾ ವತಿಯಿಂದ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಇಚ್ಛಾ ಅನುಮತಿ ಪತ್ರ.

4) ಜಾತಿ ಪ್ರಮಾಣ ಪತ್ರವನ್ನು ಈ ಕೆಳಕಂಡ ನಮೂನೆಗಳಲ್ಲಿ ಸಲ್ಲಿಸತಕ್ಕದ್ದು (ಅನ್ವಯಿಸಿದಲ್ಲಿ ಮಾತ್ರ)

ಎ) ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ವಿತರಿಸಿದ ನಮೂನೆ "ಡ" ನಲ್ಲಿ.

ಬಿ) ವರ್ಗ-1ರ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ವಿತರಿಸಿದ ನಮೂನೆ -"ಇ" ರಲ್ಲಿ.

ಸಿ) ವರ್ಗ-2 ಎ, 2 ಬಿ, 3ಎ ಮತ್ತು 3ಬಿರ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ವಿತರಿಸಿದ ನಮೂನೆ - "ಎಫ್" ರಲ್ಲಿ.

**ಸೂಚನೆಃ** ಈ ಹುದ್ದೆಗೆ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದಂದು ನಮೂನೆ - "ಎಫ್" ನಲ್ಲಿರುವ ಜಾತಿ ಪ್ರಮಾಣ ಪತ್ರವು ಕಡ್ಡಾಯವಾಗಿ ಒಂದು ವರ್ಷಕ್ಕಿಂತ ಹಳೆಯದಾಗಿರಬಾರದು.

5) ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ ಮೀಸಲಾತಿ ಅಡಿಯಲ್ಲಿ ಆಯ್ಕೆಗೆ ಬಯಸಿದರೆ ಸರ್ಕಾರಿ ಅಧಿಸೂಚನೆ ಸಂಖ್ಯೆಯ ಡಿಪಿಎಆರ್ 23 ಎಸ್‌ಆರ್‌ಆರ್ 99, ದಿನಾಂಕಃ 23.11.2000ರನ್ವಯ ಸರ್ಕಾರದ ಸುತ್ತೋಲೆ ಸಂಖ್ಯೆಃ ಸಿಆಸುಇ 44 ಸೇನೆನಿ 2001, ದಿನಾಂಕಃ 27.7.2001ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಯೋಜನಾ ನಿರಾಶ್ರಿತ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದು, ಪ್ರತಿಯನ್ನು ಅರ್ಜಿಗೆ ಲಗತ್ತಿಸಿ ಕಳುಹಿಸಬೇಕು (ಅನ್ವಯಿಸಿದಲ್ಲಿ ಮಾತ್ರ).

6) ಮಾಜಿ ಸೈನಿಕರಾಗಿದ್ದಲ್ಲಿ ಸಂಬಂಧಪಟ್ಟ ಘಟಕದಿಂದ ಡಿಸ್‌ಚಾರ್ಜ್ ಪ್ರಮಾಣ ಪತ್ರ (ಅನ್ವಯಿಸಿದಲ್ಲಿ ಮಾತ್ರ).

7) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು ಕರ್ನಾಟಕ ಅಧಿಸೂಚನೆ ಸಂಖ್ಯೆಃ ಸಿಆಸುಇ/ 08 / ಸೆನೆನಿ/2001, ದಿನಾಂಕಃ 13.02.2001ರ ಪ್ರಕಾರ ತರಗತಿ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರುವವರು ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ/96 /ಸೆನೆನಿ/2005, ದಿನಾಂಕಃ 10.08.2005ರಲ್ಲಿ ನಿಗದಿ ಪಡಿಸಿದ ನಮೂನೆ -2ರ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಮತ್ತು ವ್ಯಾಪ್ತಿಯ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿದ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಲ್ಲಿಸುವುದು. (ನಮೂನೆ - 1 (ನಾನ್ ಕ್ರೀಮಿ ಲೇಯರ್) ಮತ್ತು ನಮೂನೆ-2 ಇವುಗಳು ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ಅಭ್ಯರ್ಥಿಗಳಿಗೆ ಕಡ್ಡಾಯವಾಗಿರುತ್ತದೆ).

ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, ಪ್ರವರ್ಗ-2ಎ, 2 ಬಿ, 3ಎ, 3ಬಿ ಸೇರಿದ ಅಭ್ಯರ್ಥಿಗಳು ನಮೂನೆ - 2ರಲ್ಲಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದು ಸಲ್ಲಿಸುವುದು.

**ಸೂಚನೆಃ** ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, ಪ್ರವರ್ಗ-2ಎ, ಪ್ರವರ್ಗ-2 ಬಿ, ಪ್ರವರ್ಗ-3ಎ, ಪ್ರವರ್ಗ-3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

8) ಕನ್ನಡ ಮಾಧ್ಯಮ ಅಭ್ಯರ್ಥಿಯು ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಶಾಲಾ ಮುಖ್ಯೋಪಾಧ್ಯಾಯರಿಂದ ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿ ಸಲ್ಲಿಸುವುದು (ಅನ್ವಯಿಸಿದಲ್ಲಿ ಮಾತ್ರ).

9) ಜೈಲರ್ ಹುದ್ದೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಅರ್ಜಿ ಭಾಗ-2 ರಲ್ಲಿ ಹಾಜರಾತಿ ಹಾಳೆಯನ್ನು ತ್ರಿಪ್ರತಿಯಲ್ಲೂ ಹಾಗೂ ವಾರ್ಡರ್ ಹುದ್ದೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಅರ್ಜಿ ಭಾಗ - 2 ರಲ್ಲಿ ಹಾಜರಾತಿ ಹಾಳೆಯನ್ನು ದ್ವಿಪ್ರತಿಯಲ್ಲಿ ಸಲ್ಲಿಸುವುದು.

10) ಚೆಕ್ ಲಿಸ್ಟ್.

11) ಅಭ್ಯರ್ಥಿಯು ಅಂಚೆ ಮೂಲಕ ಅರ್ಜಿಯನ್ನು ಕಳುಹಿಸಿದಲ್ಲಿ ಅರ್ಜಿಯೊಂದಿಗೆ ನೀಡಲಾಗುವ ಸ್ವೀಕೃತಿಕಾರ್ಡ್ ಮೇಲೆ ರೂ.5/-ರ ಸ್ಟ್ಯಾಂಪನ್ನು ಅಂಟಿಸಿ ವಿಳಾಸವನ್ನು ಸ್ಪಷ್ಟವಾಗಿ ಬರೆದು ಸಲ್ಲಿಸಬೇಕು.

12) ಅಭ್ಯರ್ಥಿಗಳು ಅರ್ಜಿಯ ಜೊತೆಯಲ್ಲಿ ನೀಡಿರುವ ಲಕೋಟೆಯಲ್ಲಿ ಮಾತ್ರ ಅರ್ಜಿಯನ್ನು ಕಳುಹಿಸಬೇಕು.

**ಟಿಪ್ಪಣಿಃ** 1) ಅರ್ಜಿ ಭಾಗ - 2ಕ್ಕೆ ಪ್ರಮಾಣ ಪತ್ರಗಳ ಜೆರಾಕ್ಸ್ ಪ್ರತಿಗಳನ್ನು ಮಾತ್ರ ಲಗತ್ತಿಸುವುದು. ಮೂಲಪ್ರಮಾಣ ಪತ್ರಗಳನ್ನು ಲಗತ್ತಿಸಬಾರದು.

2) ಈ ಅಧಿಸೂಚನೆಯ ಅನ್ವಯ ಅಗತ್ಯವಿರುವ ಲಗತ್ತುಗಳನ್ನು ಅರ್ಜಿಯೊಂದಿಗೆ ಲಗತ್ತಿಸದೆ ನಂತರ ತಂದು ಒಪ್ಪಿಸಿದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

3) ಅರ್ಜಿಯೊಂದಿಗೆ ಲಗತ್ತಿಸಿದ ಪ್ರಮಾಣ ಪತ್ರಗಳ ಕುರಿತಂತೆ ಸುಳ್ಳು ಮಾಹಿತಿ ನೀಡಿದರೆ ಅಂತಹ ಅರ್ಜಿಗಳನ್ನು ಪತ್ರ ವ್ಯವಹಾರವಿಲ್ಲದೇ ಸಾರಾಸಗಟಾಗಿ ತಿರಸ್ಕರಿಸಲಾಗುವುದು.

4) ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ವಿಳಾಸ ಬದಲಾವಣೆಯಾಗಿದ್ದಲ್ಲಿ ತಕ್ಷಣದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ನೇಮಕಾತಿ ಸಮಿತಿಯ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ನೇಮಕಾತಿ ಸಮಿತಿಯು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ನೇಮಕಾತಿ ಸಮಿತಿಯು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.

5) ಅಭ್ಯರ್ಥಿಗಳು ನೇಮಕಾತಿ ಸಮಿತಿಯೊಡನೆ ಸಂಪರ್ಕಿಸಬೇಕಾದ ಸಂದರ್ಭದಲ್ಲಿ ಅವರ ಮನವಿ ಈ ಕೆಳಕಂಡ ಮಾಹಿತಿಗಳನ್ನು ಒಳಗೊಂಡಿರಬೇಕು.

i) ಅರ್ಜಿಯ ನಕಲು ಪ್ರತಿ

ii) ಅರ್ಜಿ ಸಲ್ಲಿಸಿದ ಬಗ್ಗೆ ನೇಮಕಾತಿ ಸಮಿತಿಯ ಕಛೇರಿಯವರು ನೀಡಿದ ಅರ್ಜಿ ಸ್ವೀಕೃತಿ ಪತ್ರ / ಕೌಂಟರ್ ಫಾಯಿಲ್.

**13) ಶುಲ್ಕ:**

ನಿಗದಿತ ಪರೀಕ್ಷಾ ಶುಲ್ಕವಾದ **ರೂ.200/-ಗಳನ್ನು ಕ್ರಾಸ್ಡ್ ಡಿಮ್ಯಾಂಡ್ ಡ್ರಾಫ್ಟ್** ಮೂಲಕ ಈ ಅಧಿಸೂಚನೆ ಹೊರಡಿಸಿದ ದಿನಾಂಕದಂದು ಅಥವಾ ನಂತರ ಖರೀದಿಸಿ, **ಸದಸ್ಯ ಕಾರ್ಯದರ್ಶಿ, ಕಾರಾಗೃಹಗಳ ಇಲಾಖಾ ನೇಮಕಾತಿ ಸಮಿತಿ, ಬೆಂಗಳೂರು-9 (Member Secretary, Prisons Department Recruitment Committee, Bangalore-9)** ಇವರಿಗೆ **ಸಂದಾಯವಾಗುವಂತೆ ಕಳುಹಿಸಬೇಕು.** ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ-1ರ ಅಭ್ಯರ್ಥಿಗಳಿಗೆ ಪರೀಕ್ಷಾ ಶುಲ್ಕ ಪಾವತಿಯಿಂದ ಪೂರ್ಣ ವಿನಾಯಿತಿ ನೀಡಲಾಗಿದೆ. ಆದರೆ ಅರ್ಜಿಯ ಶುಲ್ಕವನ್ನು ಪಾವತಿಸಬೇಕು. **ಅರ್ಜಿಯ ಜೊತೆಗೆ ನಗದು ಹಣವನ್ನು, ಚೆಕ್‌ಗಳನ್ನು, ಮನಿಆರ್ಡರ್‌ಗಳನ್ನು, ಕ್ರಾಸ್ ಮಾಡಿರದ ಡಿಮ್ಯಾಂಡ್ ಡ್ರಾಫ್ಟ್‌ನ್ನು, ಕೋರ್ಟ್ ಫೀ ಸ್ಟ್ಯಾಂಪನ್ನು, ರೆವಿನ್ಯೂ ಅಥವಾ ಪೋಸ್ಟಲ್ ಸ್ಟ್ಯಾಂಪನ್ನು, ಪೋಸ್ಟಲ್ ಆರ್ಡರ್‌ಗಳನ್ನು ಕಳುಹಿಸಿದಲ್ಲಿ ಅಂತಹ ಅರ್ಜಿಗಳನ್ನು ಪೂರ್ವ ಮಾಹಿತಿ ನೀಡದೆ ತಿರಸ್ಕರಿಸಲಾಗುವುದು.**

14) **ನೇಮಕಾತಿಗೆ ಅನರ್ಹತೆಗಳು:**

1 ) ಈ ಕೆಳಗೆ ಕಾಣಿಸಿದವರಲ್ಲದ ಯಾವ ವ್ಯಕ್ತಿಯು ಈ ಅಧಿಸೂಚನೆಯಲ್ಲಿ ವಿವರಿಸಿದ ಹುದ್ದೆಗಳಿಗೆ ಅರ್ಹನಾಗಿರುವುದಿಲ್ಲ.

(ಎ) ಭಾರತದ ಪೌರ ಅಥವಾ

(ಬಿ) ನೇಪಾಳದ ಪ್ರಜೆ ಅಥವಾ

(ಸಿ) ಭೂತಾನದ ಪ್ರಜೆ ಅಥವಾ

(ಡಿ) ಭಾರತದಲ್ಲಿ ಖಾಯಂ ಆಗಿ ನೆಲಸುವ ಉದ್ದೇಶದಿಂದ 1962ರ ಜನವರಿ 1ನೇ ದಿನಾಂಕಕ್ಕೆ ಮೊದಲು ಭಾರತಕ್ಕೆ ಬಂದಿರುವ ಟಿಬೆಟಿಯನ್ ನಿರಾಶ್ರಿತರ ಅಥವಾ

(ಇ) ಪಾಕಿಸ್ತಾನ, ಮ್ಯಾನ್ಮಾರ (ಬರ್ಮಾ), ಶ್ರೀಲಂಕಾ ಅಥವಾ ಆಫ್ರಿಕಾದ ರಾಷ್ಟ್ರಗಳಾದ ಕೆನ್ಯಾ, ಉಗಾಂಡಾ, ತಾಂಜಾನಿಯಾ ಸಂಯುಕ್ತ ಗಣರಾಜ್ಯ (ಹಿಂದಿನ ಟಾಂಗೋನಿಕಾ ಅಂಝೀಬಾರ), ಝಾಂಬಿಯಾ ಮಾಲ್ವಿ, ಝೈರ್, ಇಥಿಯೋಫಿಯಾ ಅಥವಾ ವಿಯೆಟ್ನಾಂಗಳಿಗೆ ವಲಸೆ ಹೋದ ಭಾರತೀಯ ಮೂಲದ ವ್ಯಕ್ತಿ.

2) ಒಬ್ಬರಿಗಿಂತ ಹೆಚ್ಚು ಜೀವಂತ ಪತ್ನಿಯರನ್ನು ಹೊಂದಿದ ಪುರುಷ ಅಭ್ಯರ್ಥಿಗಳು ಸರ್ಕಾರದ ಪೂರ್ವಾನುಮತಿ ಇಲ್ಲದೇ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

3) ಯಾವುದೇ ಅಭ್ಯರ್ಥಿಯು ಅಧಿಕೃತ ಅಥವಾ ಅನಧಿಕೃತ ಒತ್ತಡ ಅಥವಾ ಪ್ರಭಾವ ತರಲು ಪ್ರಯತ್ನಿಸಿದಲ್ಲಿ ಅವರು ನೇಮಕಾತಿಗೆ ಅರ್ಹರಾಗುವುದಿಲ್ಲ.

4) ಯಾವುದೇ ಅಭ್ಯರ್ಥಿಯು ಅರ್ಜಿ ಹಾಕುವ ಸಮಯದಲ್ಲಿ ಯಾವುದೇ ಸರ್ಕಾರಿ ಇಲಾಖೆಯಲ್ಲಿ ಅಥವಾ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಅಥವಾ ಪ್ರಾಧಿಕಾರದಲ್ಲಿ ಖಾಯಂ ಅಥವಾ ತಾತ್ಕಾಲಿಕ ನೌಕರಿಯಲ್ಲಿದ್ದಲ್ಲಿ ಅಂತಹವರು ಸಂದರ್ಭಾನುಸಾರ ಎಲ್ಲಿ ಸೇವೆ ಸಲ್ಲಿಸುತ್ತಿದ್ದರೋ ಆಯಾ ಇಲಾಖಾ ಮುಖ್ಯಸ್ಥರು ಅಥವಾ ಸರ್ಕಾರದ ಅಥವಾ ಪ್ರಾಧಿಕಾರದ ಪೂರ್ವಾನುಮತಿ ಇಲ್ಲದೇ ಅರ್ಜಿ ಸಲ್ಲಿಸಿದ್ದಲ್ಲಿ ಅವರು ನೇಮಕಾತಿಗೆ ಅರ್ಹರಾಗುವುದಿಲ್ಲ. ಆದರೆ ಇದು ಸರ್ಕಾರದ ಯಾವುದೇ ಇಲಾಖೆಯಲ್ಲಿ ಸ್ಥಳೀಯ ಅಭ್ಯರ್ಥಿಯಾಗಿ ನೇಮಕ ಹೊಂದಿದಲ್ಲಿ ಅವರನ್ನು ಅಂತೆಯೇ ಪರಿಗಣಿಸುವವರೆಗೆ ಅನ್ವಯಿಸುವುದಿಲ್ಲ.

5) ಕೆಳಕಾಣಿಸಿದ ಯಾವುದೇ ವ್ಯಕ್ತಿ ಹುದ್ದೆಗೆ ನೇಮಕಾತಿಯಾಗಲು ಅರ್ಹರಲ್ಲ.

ಎ) ಕಾನೂನು ಬಾಹಿರ ಸಂಸ್ಥೆಯೆಂದು ಅಥವಾ ಸಂಘವೆಂದು ಘೋಷಿಸಲಾದಂತಹ ಯಾವುದೇ ಸಂಸ್ಥೆಯ ಅಥವಾ ಸಂಘದ ಸದಸ್ಯರಾಗಿದ್ದರೆ ಅಥವಾ ಸ್ವಂತ ಅಥವಾ ಬೇರೆಯವರ ಸಂಬಂಧ ಹೊಂದಿದ್ದಲ್ಲಿ ಅಥವಾ ಸಂಪರ್ಕ ಹೊಂದಿದ್ದಲ್ಲಿ ಅಥವಾ

ಬಿ) ಈ ಕೆಳಕಂಡ ಯಾವುದೇ ಚಟುವಟಿಕೆ ಅಥವಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರೆ ಅಥವಾ ಸಂಪರ್ಕವಿಟ್ಟುಕೊಂಡಿದ್ದರೆ

i) ಭಾರತ ಸಂವಿಧಾನವನ್ನು ಬುಡಮೇಲು ಮಾಡುವ ಉದ್ದೇಶವನ್ನು ಹೊಂದಿರುವ

ii) ಹಿಂಸಾತ್ಮಕ ಕೃತ್ಯವು ಒಳಗೊಂಡ ಸಂಘಟಿತದ ಕಾನೂನು ಉಲ್ಲಂಘನೆ ಅಥವಾ ಪ್ರತಿಭಟನೆಯ ಉದ್ದೇಶ ಹೊಂದಿರುವ

iii) ಭಾರತದ ಪರಮಾಧಿಕಾರದ ಮತ್ತು ಸಮಗ್ರತೆಯ ಹಿತಾಸಕ್ತಿಗಳಿಗೆ ಅಥವಾ ರಾಜ್ಯ ಭದ್ರತೆಗೆ ಪ್ರತಿಕೂಲವಾದ ಉದ್ದೇಶವನ್ನು ಹೊಂದಿರುವ ಅಥವಾ

iv) ಧರ್ಮ, ಕುಲ, ಭಾಷೆ, ಜಾತಿ ಅಥವಾ ಕೋಮುಗಳ ಆಧಾರದ ಮೇಲೆ ವಿವಿಧ ವರ್ಗಗಳ ಜನರ ನಡುವೆ ದ್ವೇಷ ಅಥವಾ ಹಗೆತನದ ಭಾವನೆಗಳನ್ನು ಪ್ರಚೋದಿಸುವ ಅಥವಾ

ಸಿ) ಭಾರತ ಸರ್ಕಾರದ ಅಥವಾ ಯಾವುದೇ ರಾಜ್ಯಸರ್ಕಾರದ ಸೇವೆಯಿಂದ ವಜಾ ಆಗಿರುವವರು.

6) ಯಾವುದೇ ವ್ಯಕ್ತಿ ಕ್ರಿಮಿನಲ್ ಮೊಕದ್ದಮೆಯಲ್ಲಿ ಶಿಕ್ಷೆಗೆ ಗುರಿಯಾಗಿರಬಾರದು ಹಾಗೂ ಕೇಂದ್ರ ಅಥವಾ ಯಾವುದೇ ರಾಜ್ಯ ಲೋಕಸೇವಾ ಆಯೋಗದವರು ನಡೆಸುವ ಯಾವುದೇ ಪರೀಕ್ಷೆಗಳಿಗೆ ಅಥವಾ ಆಯ್ಕೆಗಳಿಗೆ ಹಾಜರಾಗಿರುವುದರಿಂದ, ತಾತ್ಕಾಲಿಕವಾಗಿ ಬಹಿಷ್ಕರಿಸಿದ್ದರೆ ಅಥವಾ ಖಾಯಂ ಆಗಿ ಅನರ್ಹಗೊಂಡಿದ್ದರೆ ಅಥವಾ ಬಹಿಷ್ಕರಿಸಿದ್ದರೆ. ಸರ್ಕಾರವು ಈ ಎಲ್ಲಾ ಸಂದರ್ಭಗಳನ್ನು ಪುನರಾವಲೋಕಿಸಿ ಈ ನೇಮಕಾತಿಗೆ ಅರ್ಹನೆಂದು ಪರಿಗಣಿಸುವವರೆಗೆ ಸಾಧಾರಣವಾಗಿ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

7) ಕ್ರಿಮಿನಲ್ ಅಪರಾಧ ಮೊಕದ್ದಮೆಗಳಲ್ಲಿ ಒಳಗೊಂಡ ಅಭ್ಯರ್ಥಿಯನ್ನು ಅನರ್ಹರೆಂದು ಪರಿಗಣಿಸಲಾಗುವುದು.

8) ಅಪೂರ್ಣ ಅರ್ಜಿಗಳನ್ನು ಹಾಗೂ ಸುಳ್ಳು ಮಾಹಿತಿಯನ್ನೊಳಗೊಂಡ ಅರ್ಜಿಗಳು ಅನರ್ಹಗೊಳ್ಳುತ್ತವೆ.

9) ಸೇವಾ ನಿರತ ಅಭ್ಯರ್ಥಿಗಳ ವಾರ್ಷಿಕ ಪ್ರತಿಕೂಲ ನಮೂದುಗಳಿದ್ದರೆ ಅಥವಾ ಅವರ ವಿರುದ್ಧ ಇಲಾಖಾ ವಿಚಾರಣೆ ಇದ್ದರೆ ಅಂತಹ ಅಭ್ಯರ್ಥಿಗಳು ಅನರ್ಹರಾಗುವರು.

15) **ಷರತ್ತುಗಳು:**

1) ಇಲಾಖೆಯಿಂದ ನೀಡುವ ಅರ್ಜಿಗಳನ್ನು ಹೊರತುಪಡಿಸಿ ಇತರೆ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

2) ನಿಗದಿತ ಕೊನೆಯ ದಿನಾಂಕ ಮತ್ತು ವೇಳೆಯ ನಂತರ ಸ್ವೀಕರಿಸಲಾದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

3) ಅಭ್ಯರ್ಥಿಯು ಅರ್ಜಿ ಹಾಕುವ ಸಮಯದಲ್ಲಿ ಯಾವುದೇ ಕೇಂದ್ರ / ರಾಜ್ಯ ಸರ್ಕಾರದ ಅಥವಾ ಸರ್ಕಾರದ ಯಾವುದೇ ಪ್ರಾಧಿಕಾರ ಅಥವಾ ಕೇಂದ್ರ ಅಥವಾ ರಾಜ್ಯ ಸಾರ್ವಜನಿಕ ಸ್ವಾಮ್ಯಗಳಲ್ಲಿ ನೌಕರಿಯಲ್ಲಿದ್ದಲ್ಲಿ ಅಂತಹವರು ಇಲಾಖಾ ಮುಖ್ಯಸ್ಥರ ಅಥವಾ ನೇಮಕಾತಿ ಪ್ರಾಧಿಕಾರಿಯಿಂದ ಸೂಕ್ತ ದೃಢೀಕರಣದ ಪತ್ರದೊಂದಿಗೆ ಸಮುಚಿತ ಮಾರ್ಗದಲ್ಲಿ ಅರ್ಜಿಯನ್ನು ಸಲ್ಲಿಸಬೇಕು ಹಾಗೂ ಕಾರಾಗೃಹ ಇಲಾಖೆಯಲ್ಲಿ ನೇಮಕಗೊಂಡಲ್ಲಿ ಕಾರಾಗೃಹ ಇಲಾಖಾ ಸೇವೆಗೆ ಕರ್ತವ್ಯದಿಂದ ಬಿಡುಗಡೆ ಮಾಡಲು ಅನುಮತಿ ಪತ್ರವಿರಬೇಕು.

4) ಅಭ್ಯರ್ಥಿಯು ನಿಗದಿಗೊಳಿಸಿದ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆಗಳಲ್ಲಿ ಅನುತ್ತೀರ್ಣರಾದರೆ ಅಂತಹವರು ಮೌಖಿಕ ಸಂದರ್ಶನಕ್ಕೆ ಅರ್ಹತೆ ಹೊಂದುವುದಿಲ್ಲ.

5) ಅಭ್ಯರ್ಥಿಯು ಒಂದು ಸಲ ಪರೀಕ್ಷಾ ಕೇಂದ್ರವನ್ನು ಆಯ್ಕೆ ಮಾಡಿದ್ದಲ್ಲಿ ಆ ಪರೀಕ್ಷಾ ಕೇಂದ್ರವನ್ನು ಬದಲಾಯಿಸುವಂತಿಲ್ಲ.

6) ಅಂತಿಮವಾಗಿ ಆಯ್ಕೆಯಾದ ಅಭ್ಯರ್ಥಿಯು ಕರ್ನಾಟಕ ರಾಜ್ಯದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸಲು ಸಿದ್ದನಾಗಿರಬೇಕು.

7) ಅಭ್ಯರ್ಥಿಯು ಕಾನೂನು ಬದ್ದವಾಗಿ ತಂದೆ ತಾಯಿಗಳಿಂದ ಬೇರ್ಪಟ್ಟಿದ್ದರೂ ಸಹ ಅವರ ವರಮಾನದೊಂದಿಗೆ ಅಭ್ಯರ್ಥಿಯ ವರಮಾನವನ್ನು ಸೇರಿಸಿ ಕುಟುಂಬದ ವರಮಾನವೆಂದು ಪರಿಗಣಿಸಲಾಗುವುದು.

8) ಹಿಂದುಳಿದ ವರ್ಗಗಳಿಗೆ ಸೇರಿದ ಕಾನೂನು ಪದವೀಧರ ಅಭ್ಯರ್ಥಿಗಳು ನ್ಯಾಯಾಡಳಿತ ತರಬೇತಿಯನ್ನು ಹೊಂದುತ್ತಿರುವಾಗ ಪಡೆಯುತ್ತಿರುವ ಶಿಷ್ಯ ವೇತನವನ್ನು ಕುಟುಂಬ ವರಮಾನಕ್ಕೆ ಸೇರಿಸುವುದರಿಂದ ಕೈಬಿಡಬಹುದಾಗಿದೆ.

9) ಅಭ್ಯರ್ಥಿಯು ತಾತ್ಕಾಲಿಕ ಆಧಾರದ ಮೇಲೆ ಸ್ಥಳೀಯ ಅಭ್ಯರ್ಥಿಯಾಗಿ ಪಡೆಯುವ ಸಂಬಳ ಮತ್ತು ಶಿಷ್ಯ ವೃತ್ತಿ ಉದ್ಯೋಗ ಯೋಜನೆಯಡಿ ಸ್ವೀಕರಿಸುವ ಶಿಷ್ಯ ವೇತನವನ್ನು ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್/30/ಎಸ್‌ಬಿಸಿ/80, ದಿನಾಂಕ: 3.2.81 ರನ್ವಯ ಅವರ ಕುಟುಂಬ ವರಮಾನಕ್ಕೆ ಸೇರಿಸುವುದರಿಂದ ಕೈಬಿಡಬಹುದಾಗಿದೆ.

10) ಕೊನೆಯ ದಿನಾಂಕ ಮತ್ತು ವೇಳೆ ನಂತರ ಸ್ವೀಕರಿಸಲಾದ ಅರ್ಜಿಗಳು ಅಥವಾ ಪ್ರಮಾಣ ಪತ್ರಗಳು, ಅಂಕಪಟ್ಟಿಗಳು ಇತ್ಯಾದಿಗಳನ್ನು ಹೊಂದಿರದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

11) ಅಭ್ಯರ್ಥಿಗಳು ಎಲ್ಲಾ ವಿವರಗಳನ್ನು ನಿಗದಿತ ಅರ್ಜಿ ಪತ್ರದಲ್ಲಿ ನಮೂದಿಸಬೇಕು, ಯಾವುದೇ ದಾಖಲೆಗಳನ್ನು ಪ್ರತ್ಯೇಕವಾಗಿ ನಂತರದ ದಿನಗಳಲ್ಲಿ ಸಲ್ಲಿಸಿದಲ್ಲಿ ಅಂತಹವುಗಳನ್ನು ಅಂಗೀಕರಿಸಲಾಗುವುದಿಲ್ಲ.

12) ಅಭ್ಯರ್ಥಿಯು ನೇಮಕಾತಿ ಕಾರಣಕ್ಕೆ ನಡೆಸಿದ ಪರೀಕ್ಷೆ ಅಥವಾ ಸಂದರ್ಶನದಲ್ಲಿ ಬೇರೊಬ್ಬ ವ್ಯಕ್ತಿಯನ್ನು ತನ್ನ ಪರವಾಗಿ ಕಳುಹಿಸಿದ ಕಾರಣದಲ್ಲಿ ತಪ್ಪಿತಸ್ಥನಾಗಿದ್ದಲ್ಲಿ ವೈಯಕ್ತಿಕವಲ್ಲದ ತಮ್ಮ ಮಾಹಿತಿಗಳನ್ನು ನಮೂದಿಸಿದಲ್ಲಿ ಅಥವಾ ಕೃತ್ರಿಮ ದಾಖಲಾತಿಗಳನ್ನು ಅಥವಾ ಅಸತ್ಯ ವಿವರಗಳನ್ನು ನೀಡಿದ್ದಲ್ಲಿ ಅಥವಾ ಸುಳ್ಳು ಅಥವಾ ಸತ್ಯ ವಿಷಯಗಳನ್ನು ಮರೆಮಾಚಿದ ಅಥವಾ ಅನುಚಿತ ಮಾರ್ಗಗಳನ್ನು ಉಪಯೋಗಿಸಿದಲ್ಲಿ ಅಥವಾ ಪ್ರಯತ್ನಿಸಿದಲ್ಲಿ ಸಂಕ್ಷಿಪ್ತವಾಗಿ ಅನರ್ಹರೆಂದು ಪರಿಗಣಿಸಲಾಗುವುದು ಮತ್ತು ಅಪರಾಧಿ ವ್ಯವಹರಣೆಗೆ ಒಳಪಡುವರು.

13) ಒಂದೇ ರೀತಿಯ ಪಾಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು ಪಡೆದು ಒಂದನ್ನು ಅರ್ಜಿಯ ಭಾಗ - 2ರಲ್ಲಿ ನಿಗದಿತ ಸ್ಥಳದಲ್ಲಿ ಅಂಟಿಸಬೇಕು, ಜೈಲರ್ ಹುದ್ದೆಗೆ ಅರ್ಜಿಯ ಭಾಗ - 2ರಲ್ಲಿ ಮೂರು ಭಾವಚಿತ್ರಗಳನ್ನು ಮೂರು ಹಾಜರಾತಿ ಹಾಳೆಗಳಿಗೆ ಅಂಟಿಸಬೇಕು. ವಾರ್ಡರ್ ಹುದ್ದೆಗೆ ಅರ್ಜಿಯ ಭಾಗ - 2ರಲ್ಲಿ ಎರಡು ಭಾವಚಿತ್ರಗಳನ್ನು ಎರಡು ಹಾಜರಾತಿ ಹಾಳೆಗಳಿಗೆ ಅಂಟಿಸಬೇಕು. ಪ್ರತಿ ಭಾವಚಿತ್ರದ ಮೇಲೆ ಅಭ್ಯರ್ಥಿಯ ಸಹಿ ಇರಬೇಕು. ಭಾವಚಿತ್ರದ ಜೆರಾಕ್ಸ್ ಪ್ರತಿಗಳನ್ನು ಉಪಯೋಗಿಸಬಾರದು.

14) ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಅಭ್ಯರ್ಥಿಯ ಅನರ್ಹತೆ ಬಗ್ಗೆ ಪತ್ತೆಯಾದಲ್ಲಿ ಅಂತಹ ಅಭ್ಯರ್ಥಿಗಳನ್ನು ಅನರ್ಹರೆಂದು ಪರಿಗಣಿಸಲಾಗುವುದು.

15) ಅರ್ಜಿಯನ್ನು ಯಾವುದೇ ಸಂದರ್ಭದಲ್ಲಿ ಮಡಚಬಾರದು ಹಾಗೂ ಓ.ಎಂ.ಆರ್ ಅರ್ಜಿಯ ಭಾಗ-1 ನ್ನು ಪಿನ್ ಅಥವಾ ಸ್ಟ್ಯಾಪಲ್ ಮಾಡಬಾರದು ಮತ್ತು ರಂಧ್ರ ಮಾಡಬಾರದು. ಅಭ್ಯರ್ಥಿಗಳು ಓ.ಎಂ.ಆರ್. ಅರ್ಜಿ ಭಾಗ-1 ರಲ್ಲಿ ನಮೂದಿಸಿರುವ ಮಾಹಿತಿ/ವಿವರಗಳ ಆಧಾರದ ಮೇರೆಗೆ ಅವರ ಅರ್ಹತೆಯನ್ನು ಪರಿಗಣಿಸುವುದರಿಂದ ಮತ್ತು ಅಭ್ಯರ್ಥಿಗಳು ಸಲ್ಲಿಸುವ ಅರ್ಜಿಗಳನ್ನು ಸ್ಕ್ಯಾನಿಂಗ್ ಮಾಡಿಸಿ ಗಣಕ ಯಂತ್ರದ ಮುಖೇನ ಅರ್ಹತಾ ಪಟ್ಟಿಯನ್ನು ಸಿದ್ಧಪಡಿಸುವುದರಿಂದ, ಅಭ್ಯರ್ಥಿಗಳು ಅರ್ಜಿಗಳನ್ನು ತುಂಬುವಾಗ ಯಾವುದೇ ತಪ್ಪು ಅಥವಾ ಸುಳ್ಳು ಮಾಹಿತಿ ನೀಡಬಾರದು. ತಪ್ಪು ಅಥವಾ ಸುಳ್ಳು ಮಾಹಿತಿ ನೀಡಿದ್ದಲ್ಲಿ ಅದಕ್ಕೆ ಅಭ್ಯರ್ಥಿಗಳೇ ಜವಾಬ್ದಾರರಾಗುತ್ತಾರೆ.

16) ಚಿತ್ತು ಅಥವಾ ಹೊಡೆದು ಹಾಕುವುದು ಕೂಡ ಮಾಡಬಾರದು. ಹಾಗೇನಾದರೂ ಚಿತ್ತು ಆದಲ್ಲಿ ಹೊಡೆದು ಹಾಕಿದಲ್ಲಿ ಅಥವಾ ಅರ್ಜಿಯನ್ನು ವಿರೂಪಗೊಳಿಸಿದಲ್ಲಿ ಮತ್ತೊಂದು ಅರ್ಜಿ ಪಡೆದು ತುಂಬಿ ಸಲ್ಲಿಸುವುದು ಅವಶ್ಯಕ. ಖರೀದಿಸಿದ ಓ.ಎಂ.ಆರ್. ಅರ್ಜಿ ಭಾಗ-1 ನ್ನು ಜೆರಾಕ್ಸ್ ಪ್ರತಿ ಮಾಡಿಸಿ, ಮೊದಲು ಜೆರಾಕ್ಸ್ ಪ್ರತಿಯಲ್ಲಿ ಭರ್ತಿಮಾಡಿ, ಅರ್ಜಿಯಲ್ಲಿನ ವಿವರಗಳು ಸರಿಯಾಗಿದೆಯೇ ಎಂದು ಮನಗಂಡು ಆ ನಂತರ ಮೂಲ ಅರ್ಜಿಯನ್ನು ಭರ್ತಿ ಮಾಡುವುದು ಸೂಕ್ತ.

17) ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ: **24.03.2007** ರ ಸಂಜೆ 5.00 ಗಂಟೆಯೊಳಗೆ ಅಥವಾ ಅದಕ್ಕಿಂತ ಮುಂಚಿತವಾಗಿ ಸದಸ್ಯ ಕಾರ್ಯದರ್ಶಿಗಳು, ಕಾರಾಗೃಹಗಳ ಇಲಾಖಾ ನೇಮಕಾತಿ ಸಮಿತಿ, ನಂ.4, ಶೇಷಾದ್ರಿ ರಸ್ತೆ, ಗಾಂಧೀನಗರ, ಬೆಂಗಳೂರು-560 009 ರವರಿಗೆ ಸ್ವತಃ ಅಥವಾ ನೋಂದಾಯಿತ ಅಂಚೆ ಮುಖಾಂತರ ಕಳುಹಿಸುವುದು.

18) ನೇಮಕಾತಿ ಸಮಿತಿಯು ನಡೆಸುವ ಯಾವುದೇ ಪರೀಕ್ಷೆಗಳಲ್ಲಿ ಅನುಚಿತವಾಗಿ ವರ್ತಿಸಿದರೆ, ಅಥವಾ ನಕಲು ಮಾಡಿದ್ದು ಕಂಡುಬಂದರೆ ಅಥವಾ ನಕಲು ಸಾಮಗ್ರಿಯನ್ನು ಹೊಂದಿದ್ದರೆ, ಅಂತಹ ಅಭ್ಯರ್ಥಿಗಳನ್ನು ಡಿಬಾರ್ ಮಾಡಲಾಗುವುದು.

19) ಅಭ್ಯರ್ಥಿಗಳು ಯಾವ ಪ್ರವರ್ಗದಡಿಯಲ್ಲಿ ಮೀಸಲಾತಿಯನ್ನು ಬಯಸುತ್ತಾರೋ ಅದೇ ಪ್ರವರ್ಗದಡಿಯಲ್ಲಿ ಆಯ್ಕೆ ಪ್ರಕ್ರಿಯೆಯನ್ನು ಮಾಡಲಾಗುವುದು. ಯಾವುದೇ ಕಾರಣಕ್ಕೆ ಅದನ್ನು ಬದಲಾಯಿಸುವಂತಿಲ್ಲ.

20) ಅಭ್ಯರ್ಥಿಗಳಿಗೆ ಕೆಲಸದಲ್ಲಿ ಕನ್ನಡವನ್ನು ಉಪಯೋಗಿಸುವ ಪೂರ್ಣ ಪರಿಜ್ಞಾನವಿರಬೇಕು. ಮೇಲ್ಕಾಣಿಸಿದ ಹುದ್ದೆಗಳಿಗೆ ಆಯ್ಕೆ ಹೊಂದಿದ ಅಭ್ಯರ್ಥಿಗಳ ಪೈಕಿ ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಗಳಲ್ಲಿ ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಂಡು ತೇರ್ಗಡೆಯಾಗದೆ ಇರುವ ಅಭ್ಯರ್ಥಿಗಳು 1984 ರ ಕೆ.ಸಿ.ಎಸ್. (ನೇಮಕಾತಿ) (ಕನ್ನಡ ಭಾಷಾ ಪರೀಕ್ಷೆ) ನಿಯಮಗಳನ್ವಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗದ ಹೊರತು ನೇಮಕ ಹೊಂದಲು ಅರ್ಹರಾಗುವುದಿಲ್ಲ. ಈ ಪರೀಕ್ಷೆಯನ್ನು ನೇಮಕಾತಿ ಪ್ರಾಧಿಕಾರಿ ನಡೆಸುವರು.

ಅಧ್ಯಕ್ಷರು,
ಕಾರಾಗೃಹಗಳ ಇಲಾಖಾ ನೇಮಕಾತಿ ಸಮಿತಿ,
ಬೆಂಗಳೂರು.

ಪಿ.ಆರ್. 93

## ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ವಿಚಕ್ಷಕದಳ, ಬಳ್ಳಾರಿ ಜಿಲ್ಲೆ, ಬಳ್ಳಾರಿರವರ ಕಛೇರಿ
## ಬುಡಾ ಕಾಂಪ್ಲೆಕ್ಸ್, 3ನೇ ಮಹಡಿ ಮೋತಿ ಸರ್ಕಲ್, ಬಳ್ಳಾರಿ ದೂರವಾಣಿ ಸಂ:08392:278967
## ಹರಾಜು ಪ್ರಕಟಣೆ
### ಸಂಖ್ಯೆ: ಇಎಕ್ಸ್‌ಇ: ಸಿಆರ್‌ಎಂ:18: 2006-07, ದಿನಾಂಕ:5ನೇ ಫೆಬ್ರವರಿ, 2007

ಅಬಕಾರಿ ಪ್ರಕರಣಗಳಲ್ಲಿ ಜಪ್ತಾದ ವಿವಿಧ ವಾಹನಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಂಬಂಧಪಟ್ಟ ತಾಲ್ಲೂಕು (ಜಾ ಮತ್ತು ತ) ಕಛೇರಿಯ ಆವರಣದಲ್ಲಿ ನಿಲ್ಲಿಸಲಾಗಿದ್ದು, ಅವು ಯಾವ ಸ್ಥಿತಿಯಲ್ಲಿದೆಯೋ, ಅದೇ ಸ್ಥಿತಿಯಲ್ಲಿ ವಿವಿಧ ಷರತ್ತುಗೊಳಪಟ್ಟು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಹರಾಜಿನ ವಿವರ ಈ ಕೆಳಗಿನಂತೆ ಇರುತ್ತದೆ.

| ಕ್ರ.ಸಂ. | ಹರಾಜು ನಡೆಯುವ ಸ್ಥಳ | ಹರಾಜಿನ ದಿನಾಂಕ ಮತ್ತು ಸಮಯ | ವಾಹನಗಳ ವಿವರ |
|---|---|---|---|
| 1. | ಅಬಕಾರಿ ಉಪ ನಿರೀಕ್ಷಕರು (ಜಾ ಮತ್ತು ತ) ಕಛೇರಿ, ಬಳ್ಳಾರಿ. | 13.03.2007 ಬೆಳಗ್ಗೆ 9.00 ಗಂಟೆಗೆ | ಟಿ.ವಿ.ಎಸ್. - 01<br>ಕಾರು - 02 |
| 2. | ಅಬಕಾರಿ ಉಪ ನಿರೀಕ್ಷಕರು (ಜಾ ಮತ್ತು ತ) ಕಛೇರಿ, ಸಿರುಗುಪ್ಪ. | 14.03.2007 ಬೆಳಗ್ಗೆ 9.00 ಗಂಟೆಗೆ | ಕಾರು - 02<br>ಟಾಟಾ ಸುಮೋ - 01 |
| 3. | ಅಬಕಾರಿ ಉಪ ನಿರೀಕ್ಷಕರು (ಜಾ ಮತ್ತು ತ) ಕಛೇರಿ, ಹೊಸಪೇಟೆ. | 14.03.2007 ಬೆಳಗ್ಗೆ 9.00 ಗಂಟೆಗೆ | ಸ್ಕೂಟರ್ - 01<br>ದ್ವಿಚಕ್ರ - 02<br>ಆಟೋ ರಿಕ್ಷ - 01<br>ಲಾರಿ - 01<br>ಟ್ಯಾಂಕರ್ - 01 |
| 4. | ಅಬಕಾರಿ ಉಪ ನಿರೀಕ್ಷಕರು (ಜಾ ಮತ್ತು ತ) ಕಛೇರಿ, ಕೂಡ್ಲಿಗಿ. | 15.03.2007 ಮಧ್ಯಾಹ್ನ 3.00 ಗಂಟೆಗೆ | ಟಿವಿಎಸ್-50 - 01<br>ಯಮಾಹ ಮೋಟರ್ ಸೈಕಲ್-01<br>ಲಾರಿ - 03<br>ಒಟ್ಟು - 17 |

ಷರತ್ತು ಮತ್ತು ಹೆಚ್ಚಿನ ಮಾಹಿತಿಗಾಗಿ ಸಂಬಂಧಪಟ್ಟ ತಾಲ್ಲೂಕಿನ (ಜಾ ಮತ್ತು ತ) ಕಛೇರಿಯ ಅಬಕಾರಿ ಉಪ ನಿರೀಕ್ಷಕರುಗಳಿಗೆ ಅಥವಾ ಅಬಕಾರಿ ಅಧೀಕ್ಷಕರು, ವಿಚಕ್ಷಕದಳ ಬಳ್ಳಾರಿ ಜಿಲ್ಲೆ ಇವರ ಕಛೇರಿಯನ್ನು ಸಂಪರ್ಕಿಸಬಹುದು.

ಅಬಕಾರಿ ಉಪ ಆಯುಕ್ತರು,
ಬಳ್ಳಾರಿ ಜಿಲ್ಲೆ, ಬಳ್ಳಾರಿ.

ಪಿ.ಆರ್. 87

## ಕರ್ನಾಟಕ ಲೋಕಸೇವಾ ಆಯೋಗ
## ತಿದ್ದುಪಡಿ
### ಸಂಖ್ಯೆ: ಇ.ಪ.(1) 2-178/ 2006-07, ದಿನಾಂಕ:6ನೇ ಫೆಬ್ರವರಿ, 2007

ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1) 890/ 2006-07/ ಪಿಎಸ್‌ಸಿ ದಿನಾಂಕ:16.08.2006ರಲ್ಲಿ ಪ್ರಕಟಿಸಲಾಗಿರುವ 2006ನೇ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶದ ಅಡಿ "ಬೆಳಗಾಂ" ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್-'ಎ' ಅಡಿಯಲ್ಲಿ ಜನರಲ್ ಲಾ ಭಾಗ-1ರ ಸಾಮಾನ್ಯ ದರ್ಜೆ ಅಡಿಯಲ್ಲಿ ಹಾಗೂ "ರೆವಿನ್ಯೂ ಹೈಯರ್ ಭಾಗ-I ಮತ್ತು ಭಾಗ-II" ರ ವಿಷಯದ ಶೀರ್ಷಿಕೆಯ ಕೆಳಗೆ ಪ್ರಥಮ ದರ್ಜೆ ರಡಿಯಲ್ಲಿನ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 56889ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ (ಪ್ರ)
ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

ಪಿ.ಆರ್. 82

## HOME DEPARTMENT
## NOTIFICATION
### No. HD 145 KSS 2005, Bangalore, Dated:8th August, 2006

**Shri R.B. SHETTY,** Joint Director, Sainik Welfare & Resettlement Department, Bangalore, is hereby permitted to change his name as **B.R. SHETTY.**

**S. RAMAKRISHNA**
Secretary to Government (PCAS),
Home Department.

PD-25

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಸಾಮಾಜಿಕ ಅರಣ್ಯ ವಿಭಾಗ ತುಮಕೂರು
## ಟೆಂಡರ್ ಕಂ ಹರಾಜು ಪ್ರಕಟಣೆ
### ಸಂಖ್ಯೆ: ಎ1: ಬಿಯುಡಿ:ನೀನೆತೋ:ಕತ್ರಾವಣೆ: ವಿವ:27/ 05-06, ದಿನಾಂಕ:3ನೇ ಫೆಬ್ರವರಿ, 2007

ಈ ಮೂಲಕ ನೋಂದಾಯಿತ ಅರಣ್ಯ ಗುತ್ತಿಗೆದಾರರಿಗೆ/ ಸ್ಥಳೀಯ ಮಾರಾಟಗಾರರಿಗೆ ತಿಳಿಯಪಡಿಸುವುದೇನೆಂದರೆ ತುಮಕೂರು ಸಾಮಾಜಿಕ ಅರಣ್ಯ ವಿಭಾಗಕ್ಕೆ ಸಂಬಂಧಿಸಿದ ಈ ಕೆಳಕಂಡ ಸ್ಥಳಗಳಲ್ಲಿರುವ ನೀಲಗಿರಿ/ ಅಕೇಶಿಯಾ/ ಕರಿಜಾಲಿ ಮರಗಳನ್ನು ಈ ಕೆಳ ಸಹಿ ಮಾಡಿರುವವರಾಗಲೀ ಅಥವಾ ಈ

ಸಂಬಂಧವಾಗಿ ಅಧಿಕಾರ ಪಡೆದ ಇತರೆ ಅಧಿಕಾರಿಗಳಾಗಲೀ ಈ ಕೆಳಗೆ ನಮೂದಿಸಿರುವ ದಿನಾಂಕ ಹಾಗೂ ಸಮಯದಂದು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಮಾಜಿಕ ಅರಣ್ಯ ವಿಭಾಗ ರವರ ಕಛೇರಿಯಲ್ಲಿ ಟೆಂಡರ್ ಕಂ ಹರಾಜು ಮೂಲಕ ಸಂಪೂರ್ಣ ಹರಾಜಿನ ಇಸ್ತಿಹಾರಿನ ಷರತ್ತುಗಳಿಗನುಸಾರವಾಗಿ ವಿಲೇ ಮಾಡಲಾಗುವುದು. ಇಚ್ಛೆಯುಳ್ಳ ನೋಂದಾಯಿತ ಅರಣ್ಯ ಗುತ್ತಿಗೆದಾರರು ಸದರಿ ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸಬಹುದು.

| ಯೂನಿಟ್ ಸಂಖ್ಯೆ | ವಲಯ | ಗ್ರಾಮ ಪಂಚಾಯಿತಿ ಹೆಸರು | ಸ್ಥಳ | ವಿಸ್ತೀರ್ಣ (ಹೆ/ ಕಿ.ಮೀ.) | ಟೆಂಡರ್ ಕಂ ಹರಾಜು ನಡೆಸುವ ದಿನಾಂಕ | ಮರಗಳ ಜಾತಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಕುಣಿಗಲ್ | ಕೊಡಿಗೆಹಳ್ಳಿ | 1988-89 ಅಮೃತ್ತೂರು ರಸ್ತೆಬದಿ ನೆಡುತೋಪು | 5 | 06.03.07 | ಅಕೇಶಿಯಾ |
| 2. | ಕುಣಿಗಲ್ | ಕಗ್ಗೆರೆ | 1988-89 ಅಮೃತ್ತೂರು ರಸ್ತೆಬದಿ ನೆಡುತೋಪು | 5 | 06.03.07 | ಅಕೇಶಿಯಾ |
| 3. | ಕುಣಿಗಲ್ | ಕಂಪನಹಳ್ಳಿ | 1988-89 ರಾಜಗೆರೆ ಕೆರೆ ಅಂಗಳ ನೆಡುತೋಪು | 20 | 06.03.07 | ನೀಲಗಿರಿ/ ಅಕೇಶಿಯಾ/ ಕರಿ ಜಾಲಿ |
| 4. | ಶಿರಾ | ಗೌಡಗೆರೆ | 1984-85 ರಿಂದ 1991-92 ಹೊನ್ನೇನಹಳ್ಳಿ ಗೋಮಾಳ ನೆಡುತೋಪು | 62 | 09.03.07 | ನೀಲಗಿರಿ |
| 5. | ಶಿರಾ | ಗೌಡಗೆರೆ | 1985-86 ರಿಂದ 1994-95 ಗೌಡಗೆರೆ ಗೋಮಾಳ ನೆಡುತೋಪು | 82 | 09.03.07 | ನೀಲಗಿರಿ |
| 6. | ಕೊರಟಗೆರೆ | ಕ್ಯಾಮೇನಹಳ್ಳಿ | 1987-88 ಚಿಕ್ಕವಳ್ಳಿ ಕೆರೆ ಅಂಗಳ ನೆಡುತೋಪು | 13 | 13.03.07 | ಕರಿಜಾಲಿ |
| 7. | ಗುಬ್ಬಿ | ಹಿಂಡಿಸ್ಕೆರೆ | 1990-91 ಕೆ.ಹರಿವೇಸಂದ್ರ ಗೋಮಾಳ ನೆಡುತೋಪು | 10 | 16.03.07 | ನೀಲಗಿರಿ/ ಸರ್ವೆ/ ಅಕೇಶಿಯಾ |
| 8. | ಗುಬ್ಬಿ | ಹಿಂಡಿಸ್ಕೆರೆ | 1989-90 ಕೆ. ಹರಿವೇಸಂದ್ರ ನೆಡುತೋಪು | 10 | 16.03.07 | ನೀಲಗಿರಿ/ ಸರ್ವೆ/ ಅಕೇಶಿಯಾ |
| 9. | ಗುಬ್ಬಿ | ಇರಕಸಂದ್ರ | 1990-91 ಸಿ. ಹರಿವೇಸಂದ್ರ ನೆಡುತೋಪು | 7 | 16.03.07 | ನೀಲಗಿರಿ/ ಅಕೇಶಿಯಾ |
| 10. | ಗುಬ್ಬಿ | ಬೆಲವತ್ತ | 1988-89 ಪುರ ಸಂಪಿಗೆ ರಸ್ತೆ ಬದಿ ನೆಡುತೋಪು | 5 | 16.03.07 | ನೀಲಗಿರಿ/ ಅಕೇಶಿಯಾ |
| 11. | ಗುಬ್ಬಿ | ಬೆಲವತ್ತ | 1988-89 ಬೆಲವತ್ತ ಗೋಮಾಳ ನೆಡುತೋಪು | 11 | 16.03.07 | ನೀಲಗಿರಿ/ ಅಕೇಶಿಯಾ |
| 12. | ಗುಬ್ಬಿ | ಚಂಗಾವಿ | 1991-92 ನೆಟ್ಟೆಕೆರೆ ಗೋಮಾಳ ನೆಡುತೋಪು | 10 | 16.03.07 | ನೀಲಗಿರಿ/ ಸರ್ವೆ/ ಅಕೇಶಿಯಾ |
| 13. | ಗುಬ್ಬಿ | ಬೆಲವತ್ತ | 1989-90 ಬೆಲವತ್ತ ಗೋಮಾಳ ನೆಡುತೋಪು | 10 | 16.03.07 | ನೀಲಗಿರಿ/ ಅಕೇಶಿಯಾ/ ಸೀಮೆ ತಂಗಡಿ |
| 14. | ಗುಬ್ಬಿ | ಮಾರಶೆಟ್ಟಿಹಳ್ಳಿ | 1992-93 ಬಂಡಿಹಳ್ಳಿ ಗೋಮಾಳ ನೆಡುತೋಪು | 23 | 16.03.07 | ನೀಲಗಿರಿ/ ಸರ್ವೆ/ ಅಕೇಶಿಯಾ |
| 15. | ತುಮಕೂರು | ಗಳಿಗೇನಹಳ್ಳಿ | 1983-84 ದೊಮ್ಮನಕುಪ್ಪೆ ನೆಡುತೋಪು | 5 | 21.03.07 | ನೀಲಗಿರಿ/ ಅಕೇಶಿಯಾ |
| 16. | ತುಮಕೂರು | ಗಳಿಗೇನಹಳ್ಳಿ | 1984-85 ದೊಮ್ಮನಕುಪ್ಪೆ ನೆಡುತೋಪು | 8 | 21.03.07 | ನೀಲಗಿರಿ/ ಅಕೇಶಿಯಾ |
| 17. | ತುಮಕೂರು | ಸೀತಕಲ್ಲು | 1997-98 ಕಾಡುಗುಜ್ಜನಹಳ್ಳಿ ನೆಡುತೋಪು | 3 | 21.03.07 | ನೀಲಗಿರಿ |
| 18. | ತುಮಕೂರು | ಸೀತಕಲ್ಲು | 1998-99 ಓಜೋನಹಳ್ಳಿ ಕೆರೆಅಂಗಳ ನೆಡುತೋಪು | 2 | 21.03.07 | ನೀಲಗಿರಿ |
| 19. | ತುಮಕೂರು | ಮಲ್ಲಸಂದ್ರ | 1985-86 ಹಾಲನೂರು ನೆಡುತೋಪು | 22 | 21.03.07 | ನೀಲಗಿರಿ/ ಅಕೇಶಿಯಾ |
| 20. | ತುಮಕೂರು | ಸಿರಿವರ | 1984-85 ಗೋವಿಂದರಾಜ ಪುರ ನೆಡುತೋಪು | 20 | 21.03.07 | ನೀಲಗಿರಿ |
| 21. | ತುಮಕೂರು | ಕಣಕುಪ್ಪೆ | 1984-85 ಹೆಬ್ಬೂರು ತಿಮ್ಮಸಂದ್ರ ನೆಡುತೋಪು | 12.5 | 21.03.07 | ನೀಲಗಿರಿ/ ಅಕೇಶಿಯಾ |

**ಟೆಂಡರ್ ವಿವರ**

1. ಟೆಂಡರ್ ಫಾರಂ ಮಾರಾಟ ದಿನಾಂಕ: ಮೇಲೆ ನಮೂದಿಸಿರುವ ದಿನಾಂಕಗಳಂದು ಬೆಳಿಗ್ಗೆ 10.00 ರಿಂದ 12.00 ಗಂಟೆಯವರೆಗೆ
2. ಟೆಂಡರ್ ಸ್ವೀಕರಿಸುವ ದಿನಾಂಕ ಮತ್ತು ಸಮಯ ಮೇಲೆ ನಮೂದಿಸಿರುವ ದಿನಾಂಕಗಳಂದು ಮಧ್ಯಾಹ್ನ 2.00 ಗಂಟೆಯವರೆಗೆ
3. ಹರಾಜು ಮಾಡುವ ಹಾಗೂ ಟೆಂಡರ್ ತೆಗೆಯುವ ಸಮಯ : ಮೇಲೆ ನಮೂದಿಸಿರುವ ದಿನಾಂಕಳಂದು ಸಂಜೆ 5.00 ಗಂಟೆಯವರೆಗೆ

ನಿಗದಿಪಡಿಸಿದ ದಿನಾಂಕಗಳಂದು ನಡೆಸುವ ಹರಾಜು ಹಾಗೂ ಟೆಂಡರ್‌ನಲ್ಲಿ ಬಿಡ್ಡುದಾರರು ಭಾಗವಹಿಸದೇ ಇದ್ದಲ್ಲಿ ಅಥವಾ ಬಿಡ್ಡುಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿದಲ್ಲಿ ಮರು ಹರಾಜನ್ನು ಕ್ರಮವಾಗಿ ಕುಣಿಗಲ್ ದಿನಾಂಕ:23.03.07, ಶಿರಾ ದಿನಾಂಕ 26.03.07, ಕೊರಟಗೆರೆ ದಿನಾಂಕ:03.04.07, ಗುಬ್ಬಿ ದಿನಾಂಕ:10.04.07, ತುಮಕೂರು ದಿನಾಂಕ:12.04.07 ರಂದು ನಡೆಸಲಾಗುವುದು. ಈ ರೀತಿಯ ಮರು ಹರಾಜಿಗೆ ಪುನಃ ಯಾವುದೇ ಪ್ರಕಟಣೆ ನೀಡಲಾಗುವುದಿಲ್ಲ.

**ಷರತ್ತುಗಳು**

1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಘ, ತುಮಕೂರು ರವರ ಹೆಸರಿಗೆ ರೂ.10000/- (ಹತ್ತು ಸಾವಿರ)ಗಳ ಡಿ.ಡಿ.ಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ತೆಗೆದು ಸಲ್ಲಿಸುವುದು.
2. ಟೆಂಡರ್/ ಹರಾಜನ್ನು ಸ್ಥಳವಾರು ಮಾಡಲಾಗುವುದು. ಬಿಡ್ಡುದಾರರು ಪ್ರತಿ ನೆಡುತೋಪಿಗೆ ಪ್ರತ್ಯೇಕವಾಗಿ ಟೆಂಡರ್ ಸಲ್ಲಿಸುವುದು.
3. ಬಿಡ್ಡು/ ಟೆಂಡರ್‌ದಾರರು ಒಂದು ಯೂನಿಟ್‌ನಲ್ಲಿ ಬರುವ ಒಟ್ಟು ಮರಗಳಿಗೆ ದರವನ್ನು ಸೂಚಿಸತಕ್ಕದ್ದು.
4. ನೆಡುತೋಪಿನಲ್ಲಿರುವ ಮರಗಳು ಯಾವ ಸ್ಥಿತಿಯಲ್ಲಿರುತ್ತದೆಯೋ ಅದೇ ಸ್ಥಿತಿಯಲ್ಲಿ ಟೆಂಡರ್ ಮಾಡಲಾಗುವುದು.
5. ಸ್ಯಾಂಪಲ್ ಪ್ಲಾಟ್‌ಗಳನ್ನು ರಚಿಸಿದ ಮರಗಳ ಗಣತಿಯು ಅಂದಾಜಿನಂತಿರುತ್ತದೆ.
6. ಹರಾಜು ಅಥವಾ ಟೆಂಡರ್ ಯಾರ ಹೆಸರಿಗೆ ಆಗುತ್ತದೆಯೋ ಅವರು ಹರಾಜಿನ ಪೂರ್ಣ ಮೊತ್ತ ಹಾಗೂ ಪೂರ್ಣ ತೆರಿಗೆಗಳನ್ನು ಸ್ಥಳದಲ್ಲಿಯೇ ಪಾವತಿಸುವುದು. ತಪ್ಪಿದಲ್ಲಿ ಇಎಂಡಿಯನ್ನು ಮುಟ್ಟುಗೋಲು ಹಾಕಿಕೊಂಡು ಮರು ಹರಾಜು ಮಾಡಲಾಗುವುದು. ಸರ್ಕಾರಕ್ಕೆ ನಷ್ಟ ಉಂಟಾದಲ್ಲಿ ಮೂಲ ಬಿಡ್ಡುದಾರರು ಜವಾಬ್ದಾರರಾಗಿರುತ್ತಾರೆ. (ಹಾಲಿ ಚಾಲ್ತಿಯಲ್ಲಿರುವ ತೆರಿಗೆಗಳನ್ನು ಪಾವತಿಸಬೇಕು).
7. ಹರಾಜಿನಲ್ಲಿ ಖರೀದಿಸಿದ ಮರಗಳನ್ನು ತೆಗೆಯುವಾಗ ಯಾವುದೇ ಖಾಸಗಿ ಅಥವಾ ಸರ್ಕಾರಿ ಆಸ್ತಿ ಪಾಸ್ತಿಗೆ ನಷ್ಟ ಉಂಟಾದಲ್ಲಿ ಬಿಡ್ಡುದಾರರೇ ನೇರ ಜವಾಬ್ದಾರರಾಗಿರುತ್ತಾರೆ.
8. ನೆಡುತೋಪಿನಲ್ಲಿ ವಲಯ ಅರಣ್ಯಾಧಿಕಾರಿಗಳು ಮಾರ್ಕ್ ಮಾಡಿರುವ ಮರಗಳ ನೆಡುತೋಪನ್ನು ಮಾತ್ರ ಕಡಿಯಬೇಕು.
9. ಟೆಂಡರ್-ಕಂ-ಹರಾಜು ಯಾರ ಹೆಸರಿಗೆ ಆಗುತ್ತದೆಯೋ ಅವರು ಹರಾಜು ಸ್ಥಿರೀಕರಿಸಿಕೊಂಡು ಭದ್ರತಾ ಠೇವಣಿ ನೀಡಿ ಕತ್ತಾವಣೆ ಆದೇಶ ಪಡೆದು ನಂತರ ಕತ್ತಾವಣೆ ಪ್ರಾರಂಭಿಸುವುದು.
10. ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಸೇರಿರುತ್ತವೆ.
11. ಹೆಚ್ಚಿನ ವಿವರಗಳನ್ನು ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.
12. ಆ ದಿನ ಬೆಳಿಗ್ಗೆ 12.00 ಗಂಟೆಯಿಂದ ಪ್ರಾರಂಭಿಸಿ ಅಪರಾಹ್ನ 2.00 ಗಂಟೆಯವರೆಗೆ ಟೆಂಡರ್ ಪ್ರಕ್ರಿಯೆಯನ್ನು ಪೂರ್ಣಗೊಳಿಸಿ ನಂತರ 3.30 ಕ್ಕೆ ಹರಾಜು ಪ್ರಕ್ರಿಯೆಯನ್ನು ಪ್ರಾರಂಭಿಸಲಾಗುವುದು.
13. ಸ್ವೀಕರಿಸಲಾದ ಟೆಂಡರುಗಳನ್ನು ಅದೇ ದಿನಾಂಕದಂದು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರು ಅಥವಾ ಅವರಿಂದ ನೇಮಿಸಲ್ಪಟ್ಟವರಿಂದ ಹರಾಜು ಪ್ರಕ್ರಿಯೆ ಪೂರ್ಣಗೊಂಡ ನಂತರ ಅಪರಾಹ್ನ 5.00 ಗಂಟೆಗೆ ಹಾಜರಿರುವ ಅರಣ್ಯ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
14. ಅಂಗೀಕರಿಸಿದ ಬಿಡ್ಡುದಾರರು ಬಿಡ್ಡಿನ ಮೊತ್ತಕ್ಕೆ/ ಟೆಂಡರ್ ಮೊತ್ತಕ್ಕೆ ಶೇ.8ರಷ್ಟು ಅರಣ್ಯಾಭಿವೃದ್ಧಿ ತೆರಿಗೆ (FDT) ಯನ್ನು ಹಾಗೂ ಬಿಡ್ಡಿನ ಮೊತ್ತ, ಅರಣ್ಯಾಭಿವೃದ್ಧಿ ತೆರಿಗೆ ಇವೆರೆಡರ ಮೇಲೆ ಶೇ.12.5ರಷ್ಟು ವ್ಯಾಟ್ ಹಾಗೂ ಈ ಮೂರರ ಮೊತ್ತದ ಮೇಲೆ ಶೇ.15ರಷ್ಟು ಆದಾಯ ತೆರಿಗೆ, ಆದಾಯ ತೆರಿಗೆ ಮೇಲೆ ಶೇ.15ರಷ್ಟು ಸರ್‌ಚಾರ್ಜ್ ಮೊತ್ತದಷ್ಟು ಪೂರ್ಣ ತೆರಿಗೆಯನ್ನು ಪಾವತಿಸಬೇಕು.
15. ಬಿಡ್ಡುದಾರರು ಹರಾಜಿನಲ್ಲಿ ಭಾಗವಹಿಸುವುದಕ್ಕಿಂತ ಮುಂಚೆ ಸದರಿ ನೆಡುತೋಪುಗಳನ್ನು ಸ್ಥಳದಲ್ಲಿ ವೀಕ್ಷಿಸಿ ಭಾಗವಹಿಸತಕ್ಕದ್ದು.
16. ನೆಡುತೋಪಿನಲ್ಲಿರುವ ಮರಗಳ ಸಂಖ್ಯೆ ಸ್ಯಾಂಪಲ್ ಪ್ಲಾಟ್ ರಚಿಸಿರುವ ಮರಗಳ ಗಣತಿಯ ಅಂದಾಜಿನಂತಿರುತ್ತದೆ.
17. ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಆಯಾ ತಾಲ್ಲೂಕಿನ ಎಲ್ಲಾ ಲಾಟುಗಳಿಗೆ ರೂ.10000/- ಡಿ.ಡಿ.ಯನ್ನು ಮಾತ್ರ ರಾಷ್ಟ್ರೀಕೃತ ಬ್ಯಾಂಕಿನಿಂದ ಖರೀದಿಸಿ ಸಲ್ಲಿಸುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್. 89 ಸಾಮಾಜಿಕ ಅರಣ್ಯ ವಿಭಾಗ, ತುಮಕೂರು.

**FORM- I (See Rule-9)**

**DEPARTMENT OF MASS EDUCATION**

**Office of the Commissionarate of Mass Education**

**NOTIFICATION, Dated:21st February, 2007**

**Smt B.C. RAVI** Working as Second Division Assistant in the D.K.S.A.E.C. Department of / Office of Commissionarate of Mass Education Permited to change her Name to **B.E. RAVIKUMARI.**

ಆಯುಕ್ತರು,

PD-26 ಲೋಕ ಶಿಕ್ಷಣ ಇಲಾಖೆ,

6ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-3.

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ಆಯುಕ್ತರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು-1**

**ಅಧಿಸೂಚನೆ**

**ಸಂಖ್ಯೆ:ಕೃಮಾಇ:97:ಸಿಬ್ಬಂದಿ-1(ಸಿ):2002, ದಿನಾಂಕ:13ನೇ ಫೆಬ್ರವರಿ, 2007**

**ವಿಷಯ:** ಕೃಷಿ ಮಾರಾಟ ಇಲಾಖೆಯಲ್ಲಿ ವಿವಿಧ ವೃಂದದ ಗ್ರೂಪ್-ಸಿ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅಭ್ಯರ್ಥಿಗಳ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ಸಂ: ಡಿಪಿಎಆರ್:13:ಎಸ್ ಬಿ ಸಿ:01, ದಿ:21-11-01.

2. ಈ ಕಚೇರಿಯ ಅರ್ಜಿ ಆಹ್ವಾನ ಪ್ರಕಟಣೆ ಸಂ:ಕೃಮಾಇ:97: ಸಿಬ್ಬಂದಿ-1 (ಸಿ):02, ದಿ:18-09-06.

ಕೃಷಿ ಮಾರಾಟ ಇಲಾಖೆಯಲ್ಲಿ ಬ್ಯಾಕ್‌ಲಾಗ್ ಹುದ್ದೆಗಳಾದ ಶೀಘ್ರಲಿಪಿಗಾರರು-1, ಬೆರಳಚ್ಚುಗಾರರು-2 ಹಾಗೂ ಮಾರಾಟ ಸಹಾಯಕರು-6 ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಉಲ್ಲೇಖ(2)ರಂತೆ ಇಲಾಖೆಯಿಂದ ಅರ್ಜಿ ಆಹ್ವಾನಿಸಿ ಅಧಿಸೂಚನೆ ಹೊರಡಿಸಿದ್ದು, ಬೆರಳಚ್ಚುಗಾರರ 2 ಹುದ್ದೆಗಳನ್ನು ಮಾಜಿ ಸೈನಿಕರಿಗೆ ಮೀಸಲಿಟ್ಟಿದ್ದು, ಮಾಜಿ ಸೈನಿಕರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಯಾವುದೇ ಅರ್ಜಿಗಳು ಬಂದಿಲ್ಲವಾದ್ದರಿಂದ ಸರ್ಕಾರಿ ಆದೇಶ ಸಂ:ಸಿಆಸುಇ:06:ಸೇನೆನಿ:01, ದಿ:13-02-01ರ ಕಂಡಿಕೆ 7ರಲ್ಲಿ ಸೂಚಿಸಿರುವಂತೆ ಮಾಜಿ ಸೈನಿಕರಿಗಾಗಿ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸಾಮಾನ್ಯ ಅಭ್ಯರ್ಥಿಗಳಿಂದ ಬಂದಂತಹ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

ಇಲಾಖೆಯು ಹೊರಡಿಸಿದ ಅಧಿಸೂಚನೆಯ ಪ್ರಕಾರ ಅಭ್ಯರ್ಥಿಗಳನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವಾ ನಿಯಮಗಳು (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಮೀಸಲಿದ್ದು, ಭರ್ತಿಯಾಗದೇ ಇರುವ ಖಾಲಿ ಹುದ್ದೆಗಳು)(ವಿಶೇಷ ನೇಮಕಾತಿ)(ಮೊದಲ ತಿದ್ದುಪಡಿ) ನಿಯಮಗಳು 2002ರ ನಿಯಮ 6(3)ರ ಪ್ರಕಾರ ಆಯ್ಕೆ ಮಾಡಿದ್ದು, ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಅಭ್ಯರ್ಥಿಗಳ ಗಮನಕ್ಕಾಗಿ ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

**ಸರ್ಕಾರದ ಅಧಿಸೂಚನೆಯ ಸಂ: ಡಿಪಿಎಆರ್:13:ಎಸ್‌ಬಿಸಿ:2001, ದಿ:21-11-01ರ ನಿಯಮ 6ರ ಉಪ ನಿಯಮ (1)ರ ಬ್ಯಾಕ್ ಲಾಗ್ ಹುದ್ದೆಗಳ ಮುಖ್ಯ ಆಯ್ಕೆ ಪಟ್ಟಿ**

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಮೀಸಲಾತಿ | ಶೇಕಡಾವಾರು ಅಂಕಗಳ ಮೊತ್ತ |
|---|---|---|---|---|
| 1 | 2 | 3 | 4 | 5 |
| | | **ಶೀಘ್ರಲಿಪಿಗಾರರು-1** | | |
| 1. | ಕೃಷ್ಣಪ್ಪ ಯಲ್ಲಪ್ಪ ಭಜಂತ್ರಿ,<br>ತಂದೆ:ಕೃಷ್ಣಪ್ಪ ಭಜಂತ್ರಿ,<br>ಜೋರಾಪುರ ಪೇಟೆ,<br>ಹೊಸ ಕುಂಬಾರಗಲ್ಲಿ,<br>ಎಸ್.ಪಿ. ಆಫೀಸ್ ಹಿಂದುಗಡೆ,<br>ಬಿಜಾಪುರ ಜಿಲ್ಲೆ. | 22-07-1977<br>29 ವರ್ಷ | ಪರಿಶಿಷ್ಟ ಜಾತಿ | 223.87 |
| | | **ಬೆರಳಚ್ಚುಗಾರರು-2** | | |
| 1. | ರಮೇಶ ಗುರುಲಿಂಗಪ್ಪ ದುಲಾರಿ,<br>ತಂದೆ:ಗುರುಲಿಂಗಪ್ಪ ದುಲಾರಿ,<br>ನಂ.6/14, ಆಲಮಟ್ಟಿ ಅಂಚೆ,<br>ಬಿಜಾಪುರ. | 22-07-1975<br>31 ವರ್ಷ | ಪರಿಶಿಷ್ಟ ಜಾತಿ | 142.67 |
| 2. | ಜೆ.ಪಿ.ನಾಗರಾಜ<br>ತಂದೆ. ಪುಟ್ಟಪ್ಪ ಜೆ.<br>ಕೇ.ಆಫ್. ಯುಜಮ ಮಂಜಿಲ್,<br>ಟ್ಯಾಂಕ್ ಮೊಹಲ್ಲಾ, 2ನೇ ತಿರುವು,<br>ಶಿವಮೊಗ್ಗ | 01-04-1977<br>29 ವರ್ಷ | ಪರಿಶಿಷ್ಟ ಪಂಗಡ | 142.32 |
| | | **ಮಾರಾಟ ಸಹಾಯಕರು-6** | | |
| 1. | ಡಿ.ವಿ.ರವೀಂದ್ರನಾಥ<br>ತಂದೆ.ವೆಂಕಟಶಿವಪ್ಪ ವಿ.<br>ನಂ.108, 12ನೇ ಕ್ರಾಸ್,<br>ಕುವೆಂಪು ರಸ್ತೆ,<br>ವಿವರ್ಸ್ ಕಾಲೋನಿ,<br>ಆನೇಕಲ್, ಬೆಂಗಳೂರು -562106 | 20-06-1977<br>29 ವರ್ಷ | ಪರಿಶಿಷ್ಟ ಜಾತಿ | 78.08 |

| 1 | 2 | 3 | 4 | 5 |
|---|---|---|---|---|
| 2. | ರವಿ ರಾಠೋಡ<br>ತಂದೆ. ಹುಬ್ಬುರಾಠೋಡ್<br>ಕೇ. ಆಫ್. ಬಾಬು ರಾಠೋಡ,<br>ಕೆ.ಎಸ್.ಆರ್.ಟಿ.ಸಿ. ಕ್ವಾರ್ಟರ್ಸ್,<br>ಇ–ಬ್ಲಾಕ್, ನಂ.8, ಅಥಣಿ ರಸ್ತೆ,<br>ಬಿಜಾಪುರ ಜಿಲ್ಲೆ. | 01–06–1977<br>29 ವರ್ಷ | ಪರಿಶಿಷ್ಟ ಜಾತಿ | 77.12 |
| 3. | ಗುರಪ್ಪ ತೇಗಿ<br>ತಂದೆ:ಭೀಮಪ್ಪ ತೇಗಿ<br>ಮು.ಪೋ.ರೋಣಿಹಾಳ<br>ಬಸವನಬಾಗೇವಾಡಿ ತಾ: ಬಿಜಾಪುರ<br>ಜಿಲ್ಲೆ 586210 | 01–07–1974<br>32 ವರ್ಷ | ಪರಿಶಿಷ್ಟ ಜಾತಿ<br>(ಗ್ರಾಮೀಣ<br>ಅಭ್ಯರ್ಥಿ) | 76.33 |
| 4. | ಐರಾವತಿ ಮಜಲಟ್ಟಿ<br>ತಂದೆ. ಕಲ್ಲಪ್ಪ ಕರೋಶಿ,<br>ಚಿಕ್ಕೋಡಿ ತಾಲ್ಲೂಕು<br>ಬೆಳಗಾಂ ಜಿಲ್ಲೆ–591226 | 30–07–1974<br>32 ವರ್ಷ | ಪರಿಶಿಷ್ಟ ಜಾತಿ<br>(ಮಹಿಳೆ) | 69.00 |
| 5. | ರಮೇಶ ಭೋಜನ್ನವರ,<br>ತಂದೆ ಹಣಮಂತ ಭೋಜನ್ನವರ,<br>ನಂದೇಶ್ವರ, ಅಥಣಿ ತಾ:<br>ಬೆಳಗಾಂ ಜಿಲ್ಲೆ 591240 | 20–07–1976<br>31 ವರ್ಷ | ಪರಿಶಿಷ್ಟ<br>ಪಂಗಡ | 76.96 |
| 6. | ಆರ್.ರಾಧಮ್ಮ<br>ಗಂಡ.ಚಂದ್ರಪ್ಪ ಹೆಚ್.ಆರ್.<br>ಅರುಣೋದಯ ಪ್ರೌಢಶಾಲೆ<br>ದುಮ್ಮಿ ಹೊಳಲ್ಕೆರೆ ತಾ:<br>ಚಿತ್ರದುರ್ಗ ಜಿಲ್ಲೆ | 09–06–1967<br>39 ವರ್ಷ | ಪರಿಶಿಷ್ಟ<br>ಪಂಗಡ<br>(ಮಹಿಳೆ) | 46.67 |

**ಸರ್ಕಾರದ ಅಧಿಸೂಚನೆಯ ಸಂ: ಡಿಪಿಎಆರ್:13:ಎಸ್‌ಬಿಸಿ:2001, ದಿ:21–11–01ರ ನಿಯಮ 6ರ ಉಪ ನಿಯಮ (3)ರ ಬ್ಯಾಕ್ ಲಾಗ್ ಹುದ್ದೆಗಳ ಹೆಚ್ಚುವರಿ ಆಯ್ಕೆ ಪಟ್ಟಿ**

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಮೀಸಲಾತಿ | ಶೇಕಡಾವಾರು ಅಂಕಗಳ ಮೊತ್ತ |
|---|---|---|---|---|
| 1 | 2 | 3 | 4 | 5 |
| | | ಶೀಘ್ರಲಿಪಿಗಾರರು–1 | | |
| 1. | ಶಶಿಕಲಾ ಸಿ<br>ಚಿಕ್ಕವೆಂಕಟಯ್ಯ,<br>ಪುರ ಗ್ರಾಮ, ಕೊತ್ತತ್ತಿ<br>ಹೋಬಳಿ, ತಗ್ಗಹಳ್ಳಿ ಅಂಚೆ<br>ಮಂಡ್ಯ ತಾ.:ಜಿಲ್ಲೆ. | 15–08–1976<br>30 ವರ್ಷ | ಪರಿಶಿಷ್ಟ ಜಾತಿ | 212.42 |
| | | ಬೆರಳಚ್ಚುಗಾರರು–2 | | |
| 1. | ಬಸವರಾಜ ಭೀಮಪ್ಪ ನಾಗರೇಶಿ,<br>ತಂದೆ.ಭೀಮಪ್ಪ ನಾಗರೇಶಿ,<br>ಜೋರಾಪೂರ ಪೇಟೆ,<br>ಹೊಸ ಕುಂಬಾರಗಲ್ಲಿ<br>ಎಸ್.ಪಿ.ಆಫೀಸ್ ಹಿಂದುಗಡೆ,<br>ಬಜಂತ್ರಿ ಗಲ್ಲಿ ಹತ್ತಿರ, ಬಿಜಾಪುರ<br>ಜಿಲ್ಲೆ. | 27–06–1977<br>29 ವರ್ಷ | ಪರಿಶಿಷ್ಟ ಜಾತಿ | 137.54 |
| 2. | ಭೀಮರಾಯ<br>ತಂದೆ.ಗಲೆಪ್ಪ<br>ಕೇ.ಆಫ್. ಶ್ರೀ ರಾಘವೇಂದ್ರ ಸಾಮಿಲ್,<br>ಮೇದಾಗಲ್ಲಿ, ಸುರಪುರ ತಾ:<br>ಗುಲ್ಬರ್ಗಾ ಜಿಲ್ಲೆ. | 22–07–1976<br>30 ವರ್ಷ | ಪರಿಶಿಷ್ಟ ಪಂಗಡ | 141.00 |

| 1 | 2 | 3 | 4 | 5 |
|---|---|---|---|---|
| | ಮಾರಾಟ ಸಹಾಯಕರು–6 | | | |
| 1. | ಟಿ.ಶ್ರೀನಿವಾಸ<br>ತಂದೆ.ಥಾವರಸಿಂಗ್ ಪವಾರ,<br>ಕೇ.ಆಫ್.ಆಂದೋಲು<br>ನಿಡ್ತಿ ಮನೆ, ವಿದ್ಯಾನಗರ ಕಾಲೋನಿ,<br>ಜೇವರ್ಗಿ ತಾ:, ಗುಲ್ಬರ್ಗಾ ಜಿಲ್ಲೆ<br>585310 | 02–07–1975<br>31 ವರ್ಷ | ಪರಿಶಿಷ್ಟ ಜಾತಿ | 75.33 |
| 2. | ಬಿ.ಜಿ. ರಾಜಶೇಖರ ನಾಯ್ಕ<br>ತಂದೆ ಗೋವಿಂದನಾಯ್ಕ<br>ನಂ.96, ಗಿರಿಯಬೋವಿ ಪಾಳ್ಯ, ಬನ್ನೂರ<br>ರಸ್ತೆ, ಸಿದ್ಧಾರ್ಥ ನಗರ ಅಂಚೆ,<br>ಮೈಸೂರು–570011 | 10–02–1976<br>30 ವರ್ಷ | ಪರಿಶಿಷ್ಟ ಜಾತಿ<br>(ಗ್ರಾ.ಅ) | 74.33 |
| 3. | ಧರಿಚಂದ್ರ ರಾಠೋಡ<br>ತಂದೆ.ರಾಜರಾಜ ರಾಠೋಡೆ<br>ಎ/ಪಿ, ಹಿಟ್ಟಿನಹಳ್ಳಿ<br>ಸಿಂಧಗಿ ತಾ: ಬಿಜಾಪುರ ಜಿಲ್ಲೆ–586215. | 10–10–1975<br>31 ವರ್ಷ | ಪರಿಶಿಷ್ಟ ಜಾತಿ<br>(ಗ್ರಾ.ಅ.) | 71.17 |
| 4. | ಸಾವಿತ್ರಿ ಓಗ್ಯಾನವರ<br>ತಂದೆ. ರಾಮಚಂದ್ರ<br>ರಾಮಚಂದ್ರ ನಿಲಯ,<br>ಪ್ಲಾಟ್ ನಂ.711, ಮನಗೂಳಿ ಅಗಸಿ<br>ಹತ್ತಿರ, ಕೀರ್ತಿ ನಗರ,<br>ಬಿಜಾಪುರ ಜಿಲ್ಲೆ 586101. | 01–06–1976<br>30 ವರ್ಷ | ಪರಿಶಿಷ್ಟ ಜಾತಿ<br>(ಮಹಿಳೆ) | 68.33 |
| 5. | ಸುರೇಶಗೌಡ ಪಾಟೀಲ್<br>ತಂದೆ ವಿಠಲಗೌಡ<br>ವಿದ್ಯಾನಗರ, ತಾಳೀಕೋಟೆ<br>ಮುದ್ದೇಬಿಹಾಳ ತಾ: ಬಿಜಾಪುರ ಜಿಲ್ಲೆ. | 05–06–1974<br>32 ವರ್ಷ | ಪರಿಶಿಷ್ಟ ಪಂಗಡ | 72.33 |
| 6. | ರಾಜೇಶ್ವರಿ<br>ತಂದೆ:ಮಾಣಿಕಪ್ಪಾ<br>ಕಪಲಾಪುರ, ಬೀದರ ತಾ: ಜಿಲ್ಲೆ | 01–06–1975<br>31 ವರ್ಷ | ಪರಿಶಿಷ್ಟ ಪಂಗಡ<br>(ಮಹಿಳೆ) | 39.04 |

**ಷರತ್ತುಗಳು:**

1. ಮೇಲ್ಕಂಡ ಪ್ರಕಟಿತ ಅಧಿಸೂಚನೆಯು ತಾತ್ಕಾಲಿಕ ಅಧಿಸೂಚನೆಯಾಗಿರುತ್ತದೆ.
2. ಆಕ್ಷೇಪಣೆಗಳನ್ನು ಸಲ್ಲಿಸುವ ಅಭ್ಯರ್ಥಿಗಳು ದಿ:27/02/07ರ ಸಂಜೆ 4.00 ಗಂಟೆಯೊಳಗೆ ಈ ಕಚೇರಿಯಲ್ಲಿ ಸಲ್ಲಿಸತಕ್ಕದ್ದು. ತದನಂತರ ಸ್ವೀಕೃತವಾದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.
3. ಆಯ್ಕೆ ಪಟ್ಟಿಯಲ್ಲಿ ಹೆಸರು ಸೇರ್ಪಡೆಯಾಗಿರುವ ಅಭ್ಯರ್ಥಿಗಳನ್ನು ನೇಮಕಾತಿ ಪ್ರಾಧಿಕಾರವು ನೇಮಕಾತಿ ಆದೇಶ ಹೊರಡಿಸುವ ಮೊದಲು ಸೂಕ್ತ ತನಿಖೆ/ವಿಚಾರಣೆಯನ್ನು ಕೈಗೊಂಡು ಅಭ್ಯರ್ಥಿಗಳು ಆಯ್ಕೆ ಹೊಂದಿರುವ ಹುದ್ದೆಗೆ ನೇಮಕಾತಿ ಹೊಂದಲು ಎಲ್ಲಾ ರೀತಿಯಲ್ಲೂ ಅರ್ಹರು ಎಂದು ದೃಢಪಡಿಸಿಕೊಂಡು, ದೃಢಪಟ್ಟಲ್ಲಿ ಮಾತ್ರ ಆಯ್ಕೆ ಪಟ್ಟಿಯ ಅನುಕ್ರಮದಲ್ಲಿ ಸರ್ಕಾರಿ ನೌಕರರ ನೇಮಕಾತಿ ಬಗ್ಗೆ ಕಾಲಕಾಲಕ್ಕೆ ಅನ್ವಯಿಸುವ ಸೇವಾ ನಿಯಮಗಳಿಗೆ ಹಾಗೂ ಆದೇಶಗಳನ್ವಯ ಅರ್ಹ ಅಭ್ಯರ್ಥಿಗಳಿಗೆ ನೇಮಕಾತಿ ಮಾಡಲಾಗುವುದು.
4. ಈ ಆಯ್ಕೆ ಪಟ್ಟಿಯಲ್ಲಿ ಹೆಸರು ಸೇರ್ಪಡೆಯಾದ ಮಾತ್ರಕ್ಕೆ ಅಭ್ಯರ್ಥಿಯು ನೇಮಕಾತಿಗೆ ಹಕ್ಕುದಾರರು ಎಂದು ಭಾವಿಸತಕ್ಕದಲ್ಲ.
5. ಮುಖ್ಯ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಆಬ್ಯರ್ಥಿಗಳು ನೇಮಕಾತಿ ಆದೇಶ ಹೊರಡಿಸಿ ಕಾರಣಾಂತರದಿಂದ ಹುದ್ದೆಗೆ ಹಾಜರಾಗದೆ, ಹುದ್ದೆ ಖಾಲಿಯಾದಲ್ಲಿ ಮಾತ್ರ ಹೆಚ್ಚುವರಿ ಆಯ್ಕೆ ಪಟ್ಟಿಯಲ್ಲಿನ ಅಭ್ಯರ್ಥಿಗಳನ್ನು ನೇಮಕಾತಿಗೆ ಪರಿಗಣಿಸಲಾಗುವುದು.

**ಡಾ:ಟಿ.ಸೋಮಶೇಖರ್**

ಪಿ.ಆರ್.79

ಹೆಚ್ಚುವರಿ ನಿರ್ದೇಶಕರು,
ಕೃಷಿ ಮಾರಾಟ ಇಲಾಖೆ.

## ತೋಟಗಾರಿಕೆ ಇಲಾಖೆ

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು**

**ಸಂಖ್ಯೆ:ತೋಉನಿ:ಕಉ:ವಿನಿ2:ಬಿಜಿಟಿ:7:06-07, ದಿನಾಂಕ:7ನೇ ಫೆಬ್ರವರಿ, 2007**

**ವಿಷಯಃ** ಇಂದಿರಾಗಾಂಧಿ ಸಂಗೀತ ಕಾರಂಜಿ ವಾರ್ಷಿಕ ಚಾಲನೆ ಮತ್ತು ನಿರ್ವಹಣೆ ಬಗ್ಗೆ ಟೆಂಡರ್ ಪ್ರಕಟಣೆ.

ಇಂದಿರಾಗಾಂಧಿ ಸಂಗೀತ ಕಾರಂಜಿ ಉದ್ಯಾನವನದ ಸಂಗೀತ ಕಾರಂಜಿಯ ವಾರ್ಷಿಕ ಚಾಲನೆ ಮತ್ತು ನಿರ್ವಹಣೆಯನ್ನು ಈ ಕಛೇರಿಯಿಂದ ಅದೇಶ ನೀಡಿದ ದಿನಾಂಕದಿಂದ ಒಂದು ವರ್ಷದ ಅವಧಿಗೆ ಚಾಲನೆ ಮತ್ತು ನಿರ್ವಹಣೆ ಮಾಡಲು ಪರಿಣಿತ ಸಂಸ್ಥೆಗಳಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಆಸಕ್ತಿಯುಳ್ಳ ಅಧಿಕೃತ ಸಂಸ್ಥೆಯವರು ಈ ಕೆಳಗೆ ಸೂಚಿಸಿದ ಷರತ್ತು ಮತ್ತು ನಿಬಂಧನೆಗಳಿಗೆ ಒಪ್ಪಿದಲ್ಲಿ ಟೆಂಡರ್‌ನಲ್ಲಿ ಭಾಗವಹಿಸುವುದು.

**ಮರು ಟೆಂಡರ್ ಪ್ರಕಟಣೆಯ ವಿವರಗಳು**

| | | |
|---|---|---|
| 1. | ನಿಗಧಿತ ಟೆಂಡರ್ ಫಾರಂ ಬೆಲೆ | ರೂ. 500=00 |
| 2. | ಟೆಂಡರ್ ಫಾರಂನ್ನು ಈ ಕಛೇರಿಯಿಂದ ಪಡೆಯುವ ಅವಧಿ | ದಿನಾಂಕ: 12.3.2007 ರಿಂದ 15.3.2007 ರವರೆಗೆ |
| 3. | ಭರ್ತಿ ಮಡಿದ ಟೆಂಡರ್ ಫಾರಂನ್ನು ಈ ಕಛೇರಿಯಿಂದ ಸ್ವೀಕರಿಸಲು ಕೊನೆಯ ದಿನಾಂಕ | ದಿನಾಂಕ: 16.3.2007 ಸಂಜೆ 4.00 ಗಂಟೆವರೆಗೆ |
| 4. | ಮೊಹರಾದ ಟೆಂಡರ್ ಫಾರಂಗಳನ್ನು ತೆರೆಯುವ ದಿನಾಂಕ (ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ) | ದಿನಾಂಕ: 16.3.2007 ರಂದು ಸಂಜೆ 5.00 ಗಂಟೆಗೆ |
| 5. | ಟೆಂಡರ್‌ನ್ನು ಸಲ್ಲಿಸಲು ನೀಡಬೇಕಾದ ಠೇವಣಿ (ಭದ್ರತಾ ಠೇವಣಿ) | ರೂ. 25,000=00 (ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡ್ಸ್‌ನ್ ಟ್ರಸ್ಟ್, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿನಲ್ಲಿ |

ನಿಗಧಿತ ಅವಧಿ ಮೀರಿದ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು-1.

**ಮರು ಟೆಂಡರ್ ಷರತ್ತು ಮತ್ತು ನಿಬಂಧನೆಗಳು:**

1. **ತಾಂತ್ರಿಕ ವಿಶಿಷ್ಟತೆಗಳ ವಿವರ:** ಬಿಡ್ಡುದಾರರು ಸಾಪ್ಟವೇರ್ ತಂತ್ರಜ್ಞಾನದ ಉತ್ತಮ ನಿರ್ವಹಣೆ, ನಿಪುಣತೆಯುಳ್ಳ ದಾಖಲೆಗಳನ್ನು ಹೊಂದಿರಬೇಕು.ಗಣಕ ಯಂತ್ರ ಚಾಲಿತ ಸಂಗೀತ ಕಾರಂಜಿಯನ್ನು ನಿಯಂತ್ರಿಸಲು ಮತ್ತು ಕಾರ್ಯನಿರ್ವಹಿಸಲು ತಾಂತ್ರಿಕ ಅನುಭವವುಳ್ಳವರಾಗಿರಬೇಕು. ಸಾಪ್ಟವೇರ್ ರೂಪಿಸುವ ನೈಪುಣ್ಯತೆ ಹೊಂದಿರಬೇಕು ಈ ಸಂಬಂಧವಾಗಿ ದಾಖಲಾತಿ ಗಳನ್ನು ಟೆಂಡರ್ ನೀಡುವಾಗ ಲಗತ್ತಿಸಿರಬೇಕು.
2. ಸಂಗೀತ ಕಾರಂಜಿ ನಡೆಸುವುದರ ಜೊತೆಗೆ ವಿದ್ಯುತ್ ಶಕ್ತಿಯ ಸಿಸ್ಟಮ್‌ಗಳ ನಿಯಂತ್ರಣಗಳನ್ನು ಮಾಡಬೇಕಾಗಿರುವುದರಿಂದ, 100 ಕೆ.ವಿ.ಎ. ಸಾಮರ್ಥ್ಯ (ಲೋಡ್)ವುಳ್ಳ ವಿದ್ಯುತ್‌ಚ್ಛಕ್ತಿ ಸಿಸ್ಟಮ್‌ನ್ನು ನಿರ್ವಹಿಸಬೇಕು. ಬಿಡ್ಡುದಾರರು ಸಂಗೀತ ಕಾರಂಜಿಗೆ ಬೇಕಾದಂತಹ ವಿದ್ಯುತ್‌ಚ್ಛಕ್ತಿ ಸರ್ಕ್ಯೂಟ್ ನಿರ್ವಹಣೆ ದುರಸ್ಥಿ ಇತ್ಯಾದಿಗಳನ್ನು ಕೈಗೊಳ್ಳಬೇಕು.ಹಾಗೂ ಯು.ಜಿ. ಕೇಬಲಿಂಗ್ ಫೌಂಟೇನಿನ ಪ್ಯಾನಲ್ ಬೋರ್ಡ್ ಮತ್ತು ವಿದ್ಯುತ್ ಸರ್ಕ್ಯೂಟ್‌ಗಳನ್ನು ಸ್ವತಹಃ ನಿರ್ವಹಿಸಬೇಕು. ಆದ್ದರಿಂದ, ಬಿಡ್ಡುದಾರರು ಅಧಿಕೃತ ವಿದ್ಯುತ್‌ಚ್ಛಕ್ತಿ ನಿರ್ವಹಣೆ ಗುತ್ತಿಗೆ ಲೈಸನ್ಸನ್ನು ಕರ್ನಾಟಕ ವಿದ್ಯುತ್‌ಚ್ಛಕ್ತಿ ಇಲಾಖೆಯಿಂದ ಪಡೆದವರಾಗಿರಬೇಕು.ಇವುಗಳ ಬಗ್ಗೆ ದಾಖಲಾತಿಗಳನ್ನು ಟೆಂಡರ್ ಫಾರಂನೊಂದಿಗೆ ಲಗತ್ತಿಸಿರಬೇಕು.
3. ಇಂದಿರಾಗಾಂಧಿ ಸಂಗೀತ ಕಾರಂಜಿಯು ಅಹುಜಾ ಪಬ್ಲಿಕ್ ಸಿಸ್ಟಮ್ ಇವರ ಶ್ರವಣ ಸಾಧನಕ್ಕೆ (ಅಡಿಯೋ ರ್‍ಯಾಕ್) ಒಳಪಟ್ಟು ಸ್ಥಾಪಿಸಲಾಗಿದೆ. ಇದರ ನಿರ್ವಹಣೆಯು ಕೂಡ ಬಿಡ್ಡುದಾರರದೇ ಆಗಿರುತ್ತದೆ.
4. ಸಂಗೀತ ಕಾರಂಜಿಯಲ್ಲಿ ಹೆಚ್ಚುವರಿ ಕಾರ್ಯಕ್ರಮಗಳ ನಿರ್ವಹಣೆ ಬದಲಾವಣೆ ಮತ್ತು ನಿಯಂತ್ರಣ ಬಿಡ್ಡುದಾರರದ್ದಾಗಿರುತ್ತದೆ. ಬಿಡ್ಡುದಾರರು ಹೊಸ ಹೊಸ ಸಂಗೀತದ ಸೆಟ್‌ಗಳ ಪ್ರೊಗ್ರಾಮ್‌ಗಳನ್ನು ಹೊಂದಿದ್ದು, ಅದನ್ನು ಪ್ರಾತ್ಯಕ್ಷತೆ ಮೂಲಕ ಇಂದಿರಾಗಾಂಧಿ ಕಾರಂಜಿಯಲ್ಲಿ ತೋರಿಸಲು ಶಕ್ತರಾಗಿರಬೇಕು.
5. ಸಂಗೀತ ಕಾರಂಜಿಯನ್ನು ಪ್ರತಿ ದಿನ ಸಂಜೆ 7.00 ರಿಂದ 7.30 ಗಂಟೆಯವರೆಗೆ ಹಾಗೂ 8.00 ರಿಂದ 8.30 ಗಂಟೆಯವರೆಗೆ ಅಥವಾ ತೋಟಗಾರಿಕೆ ನಿರ್ದೇಶಕರು, ಅನುಮೋದಿಸುವ ಕಾಲಾವಧಿಯಂತೆ ದಿನಕ್ಕೆ ಎರಡು ಪ್ರದರ್ಶನಗಳನ್ನು ಚಾಲನೆ ಮಾಡಬೇಕು.
6. ಸಂಗೀತ ಕಾರಂಜಿಯನ್ನು ನಿರ್ವಹಣೆ ಮಾಡಲು ಬೇಕಾಗುವ ಡೀಸಲ್ ಡಿ.ಜಿ. ಸೆಟ್ ಹಾಗೂ ಕಂಟ್ರೋಲ್ ರೂಮ್‌ಗಳ ಸಂಪೂರ್ಣ ಪಾಲನೆ ದುರಸ್ಥಿ ಹಾಗೂ ನಿರ್ವಹಣೆಯನ್ನು ಅಂಗೀಕೃತ ಟೆಂಡರ್‌ದಾರರೇ ಟೆಂಡರ್ ಅವಧಿಯಲ್ಲಿ

ನಿರ್ವಹಿಸಲು ಬದ್ಧ ರಾಗಿರಬೇಕು. ಹಾಗೂ ಎಲೆಕ್ಟ್ರಿಕಲ್ ಯಾರ್ಡ್ ಲೈಟ್ ಗಳ ನಿರ್ವಹಣೆಯನ್ನು ಟೆಂಡರ್ ದಾರರೇ ನಿರ್ವಹಿಸತಕ್ಕದ್ದು.

7. ಗುತ್ತಿಗೆ ಅವಧಿಯಲ್ಲಿ ಕಾರಂಜಿಯ ಸಂಪೂರ್ಣ ದುರಸ್ತಿಯನ್ನು ಸಹ ಟೆಂಡರ್‌ದಾರರೇ ನಿರ್ವಹಿಸಿಕೊಳ್ಳಬೇಕಾಗಿರುತ್ತದೆ.
8. ಕಾಲಕಾಲಕ್ಕೆ ತಕ್ಕಂತೆ ವಿದ್ಯುತ್ ಪ್ಯಾನಲ್‌ಗಳನ್ನು, ರೀಲೆ ಕಂಟ್ರೋಲ್ ಪ್ಯಾನಲ್‌ಗಳನ್ನು ಗಣಕ ಯಂತ್ರ ಹಾಗೂ ಬಿಡಿ ಭಾಗಗಳನ್ನು ಸುಸ್ಥಿಯಲ್ಲಿ ಇಟ್ಟಿರಬೇಕು. ಯಾವುದೇ ಕಾರಣಕ್ಕೂ ಸಂಗೀತ ಕಾರಂಜಿಯ ಪ್ರತಿ ದಿನದ 2 ಪ್ರದರ್ಶನಕ್ಕೆ ಅಡ್ಡಿಯುಂಟಾಗದಂತೆ ನೋಡಿಕೊಳ್ಳಬೇಕು.
9. ಪ್ರತಿನಿತ್ಯ ಸಂಗೀತ ಕಾರಂಜಿ ನಿರ್ವಹಣೆಗೆ ಬಳಸುವ ವಿದ್ಯುತ್ ಮೀಟರ್‌ನ ಆರ್.ಆರ್. ಸಂಖ್ಯೆ: 2845 ರ ಪ್ರತಿ ತಿಂಗಳ ಬಿಲ್ಲಿನ ಮೊತ್ತವನ್ನು ಸಂಸ್ಥೆಯವರೇ ಭರಿಸತಕ್ಕದ್ದು, ಹಾಗೂ ಕಾರಂಜಿ ಚಾಲನೆಗೆ ಬೇಕಾಗುವ ನೀರನ್ನು ಸಹ ಸಂಸ್ಥೆಯವರೇ ಖರೀದಿಸಿ ಉಪಯೋಗಿಸತಕ್ಕದ್ದು.

**ಷರತ್ತು ಮತ್ತು ನಿಬಂಧನೆಗಳು**

1. ಟೆಂಡರ್ ಜೊತೆಯಲ್ಲಿ ಠೇವಣಿ ಹಣ ರೂ.25,000=00 ಗಳಿಗೆ ಡಿಮ್ಯಾಂಡ್ ಡ್ರಾಫ್ಟನ್ನು ಲಗತ್ತಿಸಿರಬೇಕು.
2. ಡಿಮ್ಯಾಂಡ್ ಡ್ರಾಫ್ಟನ್ನು ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡನ್ ಟ್ರಸ್ಟ್ ಹಾಗೂ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಲಾಲ್‌ಬಾಗ್, ಬೆಂಗಳೂರು-4 ಇವರಿಗೆ ಪಾವತಿಯಾಗುವಂತೆ ಬೆಂಗಳೂರಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡಿದಿರಬೇಕು.
3. ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಮತ್ತು ಸ್ವೀಕರಿಸುವ ಪೂರ್ಣ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು,ಲಾಲ್‌ಬಾಗ್, ಬೆಂಗಳೂರು ರವರು ಹೊಂದಿರುತ್ತಾರೆ.
4. ಟೆಂಡರ್ ಫಾರಂನ್ನು ದಿನಾಂಕ: 12.3.2007 ರಿಂದ 15.3.2007 ರವರೆಗೆ ಈ ಕಛೇರಿ ವೇಳೆಯಲ್ಲಿ ಪಡೆಯಬಹುದು ಮೊಹರಾದ ಟೆಂಡರ್‌ಗಳನ್ನು ದಿನಾಂಕ:16.3.2007ರ ಮಧ್ಯಾಹ್ನ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು, ನಂತರ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು ಹಾಗೂ ಅದೇ ದಿನ ಸಂಜೆ 5.00 ಗಂಟೆಗೆ ಟೆಂಡರ್ ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.
5. ಟೆಂಡರ್ ಜೊತೆಯಲ್ಲಿ ಠೇವಣಿ ರೂ.25,000=00 (ರೂ. ಇಪ್ಪತ್ತೈದು ಸಾವಿರ ಮಾತ್ರ)ಗಳ ಡ್ರಾಫ್ಟ್ ಇಲ್ಲದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಟೆಂಡರ್‌ಗಳನ್ನು ಸಲ್ಲಿಸುವಾಗ ಸೀಲ್ ಮಾಡಿರಬೇಕು. ಮತ್ತು ಲಕೋಟೆಯ ಮೇಲೆ **ಒಂದು ವರ್ಷದ ಅವಧಿಗೆ ಇಂದಿರಾ ಗಾಂಧಿ ಸಂಗೀತ ಕಾರಂಜಿ ವಿಭಾಗದ ಸಂಗೀತ ಕಾರಂಜಿಯ ವಾರ್ಷಿಕ ನಿರ್ವಹಣೆ ಮತ್ತು ಚಾಲನೆ ಬಗ್ಗೆ ಟೆಂಡರ್** ಎಂದು ಬರೆದಿರಬೇಕು.
7. ಯಶಸ್ವಿ ಬಿಡ್ಡುದಾರರು ಅಂತಿಮವಾಗಿ ಬಿಡ್ಡು ನಿರ್ದೇಶಕರಿಂದ ಅನುಮೋದಿಸಲ್ಪಟ್ಟ ನಂತರ ಇಂದಿರಾಗಾಂಧಿ ಸಂಗೀತ ಕಾರಂಜಿ ನಿರ್ವಹಣೆಯನ್ನು ಟೆಂಡರ್ ಷರತ್ತು ಮತ್ತು ನಿಭಂದನೆಗಳಿಗೆ ಒಳಪಟ್ಟಂತೆ ತೃಪ್ತಿಕರವಾಗಿ ಚಾಲನೆ ಮತ್ತು ನಿರ್ವಹಣೆ ನಡೆಸಿಕೊಂಡು ಹೋಗಲಾಗುತ್ತದೆ ಎಂಬ ಬಗ್ಗೆ ಗುತ್ತಿಗೆ ಕರಾರು ರೂ.200=00 ಗಳ ಛಾಪಾ ಕಾಗದಲ್ಲಿ ಬರೆದುಕೊಡಬೇಕು.
8. ಟೆಂಡರ್‌ದಾರರು ಕನಿಷ್ಟ 5 ವರ್ಷಗಳ ಚಾಲನೆ ಮತ್ತು ನಿರ್ವಹಣೆ ಮಾಡಿರುವ ಅನುಭವ ಹೊಂದಿರಬೇಕು.
9. ಹಿಂದಿನ 3 ವರ್ಷಗಳ ಆದಾಯ ತೆರಿಗೆ ಕ್ಲಿಯರೆನ್ಸ ಸರ್ಟಿಫಿಕೇಟ್‌ನ್ನು ಲಗತ್ತಿಸಬೇಕು.
10. ರೂ.5.00 ಲಕ್ಷಗಳ ಬ್ಯಾಂಕ್ ಸಾಲ್ವೆನ್ಸಿ ಲಗತ್ತಿಸಬೇಕು.
11. ಯಶಸ್ವಿ ಬಿಡ್ಡುದಾರರು ಪ್ರತಿ ತಿಂಗಳು ತೃಪ್ತಿಕರವಾಗಿ ನಿರ್ವಹಣಾ ಕೆಲಸಗಳನ್ನು ಕೈಗೊಂಡ ಬಗ್ಗೆ ಸಂಬಂಧಿಸಿದ ವಿಭಾಗಾಧಿಕಾರಿಗಳಿಂದ ದೃಢೀಕರಿಸಿ ಪ್ರತಿ ತಿಂಗಳು ಬಿಲ್ಲನ್ನು ಪಾವತಿಗೆ ಸಲ್ಲಿಸುವುದು. ಹಾಗೂ ಈ ನಿರ್ವಹಣಾ ವೆಚ್ಚದ ಬಿಲ್ಲಿನಲ್ಲಿ ನಿಯಮಾನುಸಾರ ಅನ್ವಯವಾಗುವ ತೆರಿಗೆಗಳನ್ನು ಕಡಿತಗೊಳಿಸಲಾಗುವುದು.
12. ಟೆಂಡರ್‌ದಾರರು ಪ್ರತಿನಿತ್ಯ ಸಮರ್ಪಕವಾಗಿ ಪ್ರದರ್ಶನ ನಡೆಸುವಲ್ಲಿ ವಿಫಲವಾದಲ್ಲಿ ಆ ದಿವಸದ ಆದಾಯವನ್ನು ಸಂಸ್ಥೆಯವರೇ ಭರ್ತಿ ಮಾಡತಕ್ಕದ್ದು.
13. ಟೆಂಡರ್‌ದಾರರು ಕಾರಂಜಿಯ ಸ್ವಚ್ಛತೆಗೊಳಿಸುವ ಕಾರ್ಯವನ್ನು ಪ್ರತಿವಾರ ಕೈಗೊಳ್ಳಬೇಕು.
14. ಟೆಂಡರ್‌ದಾರರು ಯಾವುದೇ ಪೂರ್ವ ಷರತ್ತು ಮತ್ತು ನಿಭಂದನೆಗಳನ್ನು ವಿಧಿಸುವಂತಿಲ್ಲ ಮತ್ತು ಈ ಕಛೇರಿಯಲ್ಲಿ ನೀಡುವ ನಿಗದಿತ ಟೆಂಡರ್ ಫಾರಂನಲ್ಲಿ ತಿಳಿಸಿದ ವಿವರಗಳ ರೀತಿ ಬಿಡ್ಡನ್ನು ನಮೂದಿಸತಕ್ಕದ್ದು.
15. Non eligible Company Cannot negotiate.

ಹೆಚ್ಚಿನ ವಿಷಯಗಳಿಗೆ ಈ ಕಛೇರಿಯನ್ನು ಸಂಪರ್ಕಿಸಿ ಮಾಹಿತಿಯನ್ನು ಪಡೆಯಬಹುದು.

ತೋಟಗಾರಿಕೆ ಉಪ ನಿರ್ದೇಶಕರು,

ಪಿ.ಆರ್.84 ಕಬ್ಬನ್ ಉದ್ಯಾನವನ, ಬೆಂಗಳೂರು-1.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ

## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂಖ್ಯೆ: ಎ3/ಬಿಯುಡಿ/ ಆನೆ.ಆಹಾರ/ ಸಿಆರ್-72/ 2006-07, ದಿನಾಂಕ:7ನೇ ಫೆಬ್ರವರಿ, 2007**

**ವಿಷಯ:** ಕಾವೇರಿ ವನ್ಯಜೀವಿ ವಿಭಾಗದ ವ್ಯಾಪ್ತಿಗೆ ಬರುವ ಭೀಮೇಶ್ವರಿ ಆನೆ ಕ್ಯಾಂಪಿನ ಆನೆಗಳಿಗೆ 2007-08ನೇ ಸಾಲಿಗೆ ಆಹಾರ ಸಾಮಗ್ರಿಗಳ ಪೂರೈಕೆಗಾಗಿ ಟೆಂಡರ್ ಕರೆಯುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಕರ್ನಾಟಕ ಅರಣ್ಯ ಇಲಾಖೆಯಲ್ಲಿ ನೊಂದಾಯಿತ ಅರಣ್ಯ ಗುತ್ತಿಗೆದಾರರಿಂದ ಕನಕಪುರ ವನ್ಯಜೀವಿ ವಲಯ ಮುತ್ತತ್ತಿ ಶಾಖೆಗೆ ಸೇರಿದ ಭೀಮೇಶ್ವರಿ ಪ್ರದೇಶದಲ್ಲಿ ಸ್ಥಾಪಿಸಿರುವ ಆನೆ ಕ್ಯಾಂಪಿನಲ್ಲಿ ಇರುವ 3 ಆನೆಗಳಿಗೆ ಹಾಗೂ 1 ಮರಿಯಾನೆಗೆ ದಿನಾಂಕ:01.04.2007 ರಿಂದ 31.03.2008ರ ವರೆಗೆ ಬೇಕಾಗುವ ಆಹಾರ ಧಾನ್ಯಗಳ ಪೂರೈಕೆಗಾಗಿ ಪ್ರತಿ ಕೆ.ಜಿ.ಗೆ ದರ ಸೂಚಿಯನ್ನು ಮೊಹರಾದ ಟೆಂಡರನ್ನು ದಿನಾಂಕ: 08.03.2007ರಂದು ಮಧ್ಯಾಹ್ನ 3.00 ಗಂಟೆಗೆ ಈ ಕಛೇರಿಯಲ್ಲಿ ಕರೆಯಲಾಗಿದೆ. ಈ ದಿನ ಸಾರ್ವತ್ರಿಕ ರಜಾದಿನ ಎಂದು ಘೋಷಿಸಿದಲ್ಲಿ ಟೆಂಡರನ್ನು ಮುಂದಿನ ಕೆಲಸದ ದಿನದಂದು ಇದೇ ಸಮಯಕ್ಕೆ ಮುಂದೂಡಿ ನಡೆಸಲಾಗುವುದು ಸರಬರಾಜಿನ ಆಹಾರ ಪದಾರ್ಥಗಳ ವಿವರ ಈ ಕೆಳಕಂಡಂತೆ ಇರುತ್ತದೆ.

**ಆನೆಗಳಿಗೆ ಬೇಕಾಗಬಹುದಾದ ಆಹಾರ ಸಾಮಗ್ರಿಗಳ ವಿವರ**

(1) ರಾಗಿ ಹಿಟ್ಟು (2) ಹುರುಳಿ (3) ಅಕ್ಕಿ (4) ಬೆಲ್ಲ, (5) ತೆಂಗಿನಕಾಯಿ (6) ಹರಳೆಣ್ಣೆ, (7) ಬೇವಿನ ಎಣ್ಣೆ, (8) ಉಪ್ಪು.

ಟೆಂಡರ್ ಫಾರಂಗಳನ್ನು ದಿನಾಂಕ:08.03.2007 ರಂದು 1.00 ಗಂಟೆಯ ವರೆಗೆ ರೂ.200/- ಮತ್ತು ಚಾಲ್ತಿಯಲ್ಲಿರುವ ತೆರಿಗೆಯನ್ನು ಪಾವತಿಸಿ ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ ಮೊಹರಾದ ಟೆಂಡರ್ ಫಾರಂಗಳನ್ನು ಅದೇ ದಿನದಂದು ಮಧ್ಯಾಹ್ನ 2.30 ಗಂಟೆವರೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು.

ಈ ಹರಾಜನ್ನು ವಿವಿಧ ಕಾರಣಗಳಿಂದ ಅಂಗೀಕರಿಸಲು ಆಡಳಿತಾತ್ಮಕ ತೊಡಕುಗಳು ಬಂದಲ್ಲಿ ದಿನಾಂಕ:16.03.2007 ರಂದು ಮಧ್ಯಾಹ್ನ 3.00 ಗಂಟೆಗೆ ಇದೇ ಕಛೇರಿಯಲ್ಲಿ ಮತ್ತೆ ಮರು ಟೆಂಡರ್‌ನ್ನು ಮಾಡಲಾಗುತ್ತದೆ. ಈ ಬಗ್ಗೆ ಮತ್ತೊಂದು ಮರು ಟೆಂಡರ್ ಪ್ರಕಟಣೆಯನ್ನು ಹೊರಡಿಸಲಾಗುವುದಿಲ್ಲ.

**ಷರತ್ತುಗಳು**

1. ಆನೆಗೆ ಅಗತ್ಯವಾದ ಆಹಾರ ಸಾಮಗ್ರಿಗಳನ್ನು ವೈದ್ಯಾಧಿಕಾರಿಗಳ ಸಲಹೆಯಂತೆ ಹಾಗೂ ಅಗತ್ಯಕ್ಕೆ ಅನುಸಾರವಾಗಿ ಮಾತ್ರ ಖರೀದಿಸಲಾಗುತ್ತದೆ. ಹಾಗೂ ವಿಶೇಷ ಸಂದರ್ಭಗಳಲ್ಲಿ ವೈದ್ಯಾಧಿಕಾರಿಗಳ ಸಲಹೆಯಂತೆ ಮೇಲೆ ತಿಳಿಸಿದ ಆಹಾರ ಧಾನ್ಯಗಳನ್ನು ಹೊರತು ಇತರೆ ಆಹಾರ ಧಾನ್ಯಗಳ ಆವಶ್ಯಕತೆ ಕಂಡುಬಂದಲ್ಲಿ ಅವುಗಳನ್ನು ಯಶಸ್ವಿ ಗುತ್ತಿಗೆದಾರರು ಸಂಬಂಧಿಸಿದ ಟಿ.ಎ.ಪಿ.ಸಿ.ಎಂ.ಸಿ. ಅಥವಾ ಎ.ಪಿ.ಎಂ.ಸಿ. ಯಿಂದ ಖರೀದಿಸಿ ಸರಬರಾಜು ಮಾಡಿದ್ದಲ್ಲಿ ಹಣವನ್ನು ಈ ಕಛೇರಿಯಿಂದ ನೀಡಲಾಗುತ್ತದೆ.
2. ಟೆಂಡರ್‌ನಲ್ಲಿ ಭಾಗವಹಿಸುವ ಗುತ್ತಿಗೆದಾರರು ತುಂಬಿದ ಟೆಂಡರ್ ಫಾರಂನ ಜೊತೆಗೆ ರೂ.10,000/- ಇ.ಎಂ.ಡಿ. ಯನ್ನು ಬ್ಯಾಂಕ್ ಡಿ.ಡಿ. ರೂಪದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವ ವಿಭಾಗ ಕನಕಪುರ ರವರ ಹೆಸರಿನಲ್ಲಿ ಸಲ್ಲಿಸಬೇಕು.
3. ಗುತ್ತಿಗೆದಾರರು ಈ ಕಛೇರಿಯಿಂದ ಟೆಂಡರ್ ಫಾರಂ ಪಡೆಯುವ ಅವಧಿಯಲ್ಲಿ ಅವರು ಅರಣ್ಯ ಇಲಾಖೆಯಲ್ಲಿ ಗುತ್ತಿಗೆದಾರರಾಗಿ ನೊಂದಾಯಿಸಿರುವ ಬಗ್ಗೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲನೆಗಾಗಿ ಒದಗಿಸತಕ್ಕದ್ದು.
4. ಆಹಾರ ಸಾಮಗ್ರಿಗಳನ್ನು ಪ್ರತ್ಯೇಕವಾಗಿ ಸರಬರಾಜು ಮಾಡುವ ದರವನ್ನು ಪ್ರತಿ ಕೇಜಿಗೆ/ ಲೀಟರ್ ಐಟಂ ವಾರು ಸ್ಪಷ್ಟವಾಗಿ ನಮೂದಿಸಬೇಕು.
5. ಸರಬರಾಜು ಮಾಡುವ ಆಹಾರ ಪದಾರ್ಥಗಳು ಶುದ್ಧೀಕೃತಗೊಂಡಿರಬೇಕು. ಆಹಾರ ಸಾಮಗ್ರಿಗಳು ಶುದ್ಧೀಕೃತಗೊಂಡಿರುವ ಬಗ್ಗೆ ಮತ್ತು ಅಳತೆ ಪ್ರಮಾಣದ ಬಗ್ಗೆ ಸಂಬಂಧಪಟ್ಟ ವನಪಾಲಕರಿಂದ ದೃಢೀಕೃತಗೊಂಡಿರಬೇಕು. ಅಲ್ಲದೇ ಆಗಿಂದಾಗ್ಗೆ ಆಹಾರ ಸಾಮಗ್ರಿಗಳ ಗುಣಮಟ್ಟದ ಬಗ್ಗೆ ಪಶುವೈದ್ಯಾಧಿಕಾರಿಗಳಿಂದ ದೃಢೀಕೃತಗೊಳಿಸಿರಬೇಕು. ತಪ್ಪಿದ್ದಲ್ಲಿ ಸರಬರಾಜು ಮಾಡಿದ ಆಹಾರ ಸಾಮಗ್ರಿಗಳನ್ನು ತಿರಸ್ಕರಿಸಿ ನಿಬಂಧನೆಗಳ ಉಲ್ಲಂಘನೆಗೆ ಕ್ರಮ ಜರುಗಿಸಲಾಗುವುದು.
6. ಸರಬರಾಜು ಮಾಡಿದ ಆಹಾರ ಪದಾರ್ಥಗಳಿಂದಾಗಿ ಆನೆಗಳ ಆರೋಗ್ಯಕ್ಕೆ ಸಂಬಂಧಿಸಿದಂತೆ ವ್ಯತಿರಿಕ್ತ ಪರಿಣಾಮ ಸಂಭವಿಸಿದಲ್ಲಿ ವನ್ಯಜೀವಿ ಸಂರಕ್ಷಣಾ ಕಾಯ್ದೆ ಪ್ರಕಾರ ಗುತ್ತಿಗೆದಾರರ ವಿರುದ್ಧ ಕಾನೂನು ಕ್ರಮ ಕೈಗೊಳ್ಳಲಾಗುತ್ತದೆ.
7. ಟೆಂಡರನ್ನು ಯಾವುದೇ ಕಾರಣ ನೀಡದೆ ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ಇವರಲ್ಲಿ ಕಾಯ್ದಿರಿಸಿದೆ.
8. ಟೆಂಡರ್‌ನಲ್ಲಿ ಯಾವುದೇ ತಂಟೆತಕರಾರುಗಳು ಬಂದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಚಾಮರಾಜನಗರ ವೃತ್ತ, ಚಾಮರಾಜನಗರ ಇವರು ಕೈಗೊಳ್ಳುವ ತೀರ್ಮಾನವು ಅಂತಿಮವಾಗಿರುತ್ತದೆ.
9. ಟೆಂಡರ್‌ನಲ್ಲಿ ವಿವಿಧ ರೀತಿಯ ಪಡಿತರ ಸಾಮಗ್ರಿಗಳ ಸರಬರಾಜು ಮಾಡುವ ಬಗ್ಗೆ ಗುತ್ತಿಗೆದಾರರು ನಮೂದಿಸಿರುವ ದರಗಳಲ್ಲಿ ಒಂದಕ್ಕೊಂದು ಹೊಂದಾಣಿಕೆಯಾಗದ ಪಕ್ಷದಲ್ಲಿ ಟೆಂಡರ್‌ನ್ನು ರದ್ದುಗೊಳಿಸಲಾಗುವುದು.
10. ಆಹಾರ ಸಾಮಗ್ರಿಗಳನ್ನು ಸರಬರಾಜು ಮಾಡುವ ಅವಧಿಯಲ್ಲಿ ಗುತ್ತಿಗೆದಾರರಿಗೆ ಅಥವಾ ಅವರಿಂದ ನೇಮಿಸಲ್ಪಟ್ಟವರಿಗೆ ವನ್ಯಪ್ರಾಣಿಗಳಿಂದಾಗಲೀ ಅಥವಾ ಇಲಾಖೆ ಆನೆಗಳಿಂದಾಗಲೀ ಅಪಘಾತ/ ಅಡಚಣೆಗಳು ಸಂಭವಿಸಿದಲ್ಲಿ ಈ ಬಗ್ಗೆ ಇಲಾಖೆಯು ಯಾವುದೇ ಜವಾಬ್ದಾರಿಯಾಗುವುದಿಲ್ಲ.
11. ಈ ಟೆಂಡರ್ ಅಧಿಸೂಚನೆಯಲ್ಲಿ ನಮೂದಿಸಿರುವ ಷರತ್ತುಗಳಲ್ಲದೆ ವಿವರವಾದ ಟೆಂಡರ್ ಅಧಿಸೂಚನೆಯಲ್ಲಿ ನಮೂದಿಸಿರುವ ಎಲ್ಲಾ ಷರತ್ತುಗಳಿಗೂ ಒಳಪಟ್ಟಿರಬೇಕು.

**ರಾಮಚಂದ್ರ**

ಪಿ.ಆರ್. 92

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,

ಕಾವೇರಿ ವನ್ಯ ಜೀವಿ ವಿಭಾಗ, ಕನಕಪುರ.

## ಜಲಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

## ಟೆಂಡರ್ ಪ್ರಕಟಣೆ: 2006-07: 5148/ 11 ದಿನಾಂಕ:7ನೇ ಫೆಬ್ರವರಿ, 2007

## ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕು, ಅಂಜನಾಪುರ, ಅಂಬ್ಲಿಗೊಳ ಯೋಜನೆಯಡಿ ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳು

ಮೊಹರಾದ ಐಟಂವಾರು ಟೆಂಡರ್‌ಗಳನ್ನು ನಿಗದಿತ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಲೆಕ್ಕ ಶೀರ್ಷಿಕೆ 3054, ಅಂಜನಾಪುರ ಮತ್ತು ಅಂಬ್ಲಿಗೊಳ ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳಿಗೆ ನೊಂದಾಯಿಸಲ್ಪಟ್ಟಿರುವ ಅರ್ಹ ಗುತ್ತಿಗೆದಾರರಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000ರ ಅನ್ವಯ ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯಪಾಲಕ ಇಂಜಿನಿಯರ್, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ ಭದ್ರಾವತಿ ಇವರಿಂದ ಆಹ್ವಾನಿಸಲಾಗಿದೆ.

1. ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ:02.03.2007 ಸಂಜೆ 5.30 ಗಂಟೆವರೆಗೆ.
2. ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ:06.03.2007 ಸಂಜೆ 5.30 ಗಂಟೆವರೆಗೆ.
3. ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ:08.03.2007 ಸಂಜೆ 4.00 ಗಂಟೆವರೆಗೆ.
4. ಕೆಲಸವನ್ನು ಮುಗಿಸುವ ಅವಧಿ: ಒಂದು ತಿಂಗಳು.

ತುಂಬಲಾದ ಟೆಂಡರ್‌ಗಳನ್ನು ದಿನಾಂಕ:08.03.2007 ಸಂಜೆ 4.30 ಗಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೋಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು.

ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್‌ನಲ್ಲಿ ಸೂಚಿಸಿರುವ ದಿನಾಂಕಗಳು ರಜಾ ದಿನವೆಂದು ಘೋಷಿಸಲ್ಪಟ್ಟರೆ ಮುಂದಿನ ಕೆಲಸದ ದಿನವನ್ನು ಟೆಂಡರಿನಲ್ಲಿ ತಿಳಿಸಿದ ದಿನಾಂಕದ ಬದಲಾಗಿ ಪರಿಗಣಿಸಲಾಗುವುದು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ ರೂ. ಲಕ್ಷಗಳಲ್ಲಿ | ಇ.ಎಂ.ಡಿ. | ಟೆಂಡರ್ ಫಾರಂ ಬೆಲೆ (ತೆರಿಗೆಗಳು ಪ್ರತ್ಯೇಕ) | ಗುತ್ತಿಗೆದಾರರ ದರ್ಜೆ |
|---|---|---|---|---|---|
| 1 | 2 | 3 | 4 | 5 | 6 |
| ಅಂಜನಾಪುರ ಜಲಾಶಯ ಯೋಜನೆ | | | | | |
| 1. | ಶಿಕಾರಿಪುರ ತಾ: ಅಂಜನಾಪುರ ಜಲಾಶಯ ವ್ಯಾಪ್ತಿಗೆ ಸೇರಿದ ಕೆ.ಕೆ. ರಸ್ತೆಯಿಂದ ಚೆನ್ನಳ್ಳಿಗೆ ಹೋಗುವ ರಸ್ತೆ ಅಭಿವೃದ್ಧಿ ಹಾಗೂ ಡಾಂಬರೀಕರಣ 3.00 ಕಿ.ಮೀ. | 45,45,000/- | 45,500 | 5,000/- | 1ನೇ ದರ್ಜೆ |
| 2. | ಅಂಜನಾಪುರ ಜಲಾಶಯ ವ್ಯಾಪ್ತಿಯ ಮಾಸೂರು ರಸ್ತೆಯಿಂದ ನಿಂಬೆಗೊಂದಿವರೆಗೆ ಹೋಗುವ ರಸ್ತೆ ಅಭಿವೃದ್ಧಿ 3.40 ಕಿ.ಮೀ. | 13,95,000/- | 21,000 | 1500/- | 2ನೇ ದರ್ಜೆ ಮತ್ತು ಮೇಲ್ಪಟ್ಟು |
| 3. | ಅಂಜನಾಪುರ ಜಲಾಶಯ ವ್ಯಾಪ್ತಿಯ ಶಿಕಾರಿಪುರದಿಂದ ಗ್ರಾಮಕ್ಕೆ ಹೋಗುವ ಸೇವಾ ರಸ್ತೆ ಅಭಿವೃದ್ಧಿ 3.00 ಕಿ.ಮೀ. | 11,95,000/- | 18,000 | 1500/- | 2ನೇ ದರ್ಜೆ ಮತ್ತು ಮೇಲ್ಪಟ್ಟು |
| 4. | ಅಂಜನಾಪುರ ಜಲಾಶಯ ವ್ಯಾಪ್ತಿಯ ಹಳೆಗೊದ್ದನಕೊಪ್ಪನದಿಂದ ಕುಮುದ್ವತಿ ನದಿಗೆ ಹೋಗುವ ಐ.ಟಿ. ರಸ್ತೆ ಅಭಿವೃದ್ಧಿ 4.00 ಕಿ.ಮೀ. | 9,95,000/- | 20,000 | 1000 | 3ನೇ ದರ್ಜೆ ಮತ್ತು ಮೇಲ್ಪಟ್ಟು |
| 5. | ಅಂಜನಾಪುರ ಜಲಾಶಯ ವ್ಯಾಪ್ತಿಯ ಈಸೂರಿನಿಂದ ಚುರ್ಚುಗುಂಡಿ ಎರೆಬೀಳು ರಸ್ತೆ ಅಭಿವೃದ್ಧಿ 3.00 ಕಿ.ಮೀ. | 9,95,000/- | 20,000 | 1000/- | 3ನೇ ದರ್ಜೆ ಮತ್ತು ಮೇಲ್ಪಟ್ಟು |
| 6. | ಅಂಜನಾಪುರ ಜಲಾಶಯ ವ್ಯಾಪ್ತಿಯ ಗ್ರಾಮದಿಂದ ಭದ್ರಾಪುರಕ್ಕೆ ಹೋಗುವ ರಸ್ತೆ ಅಭಿವೃದ್ಧಿ 4.00 ಕಿ.ಮೀ. | 7,95,000/- | 16,000 | 1000/- | 3ನೇ ದರ್ಜೆ ಮತ್ತು ಮೇಲ್ಪಟ್ಟು |
| 7. | ಅಂಜನಾಪುರ ಜಲಾಶಯ ವ್ಯಾಪ್ತಿಯ ಎಸ್.ಐ. ರಸ್ತೆಯಿಂದ ಸಂತೋಷ್ ಮಿಲ್ ಎದುರು ಭಾಗ ಕಡ್ಲೆಕಟ್ಟೆ ರಾಮನಕಟ್ಟೆಗೆ ಹೋಗುವ ಐ.ಟಿ.ರಸ್ತೆ ಅಭಿವೃದ್ಧಿ 2.50 ಕಿ.ಮೀ. | 5,95,000/- | 12,000 | 1,000/- | 3ನೇ ದರ್ಜೆ ಮತ್ತು ಮೇಲ್ಪಟ್ಟು |
| 8. | ಅಂಜನಾಪುರ ಜಲಾಶಯ ವ್ಯಾಪ್ತಿಯ ದೊಡ್ಡತಾಂಡದಿಂದ ನೆಲವಾಗಿಲು ಹೋಗುವ ಐ.ಟಿ. ರಸ್ತೆ ಅಭಿವೃದ್ಧಿ 2.00 ಕಿ.ಮೀ. | 5,95,000/- | 12,000 | 1,000 | 3ನೇ ದರ್ಜೆ ಮತ್ತು ಮೇಲ್ಪಟ್ಟು |

| 1 | 2 | 3 | 4 | 5 | 6 |
|---|---|---|---|---|---|
| 9. | ಅಂಜನಾಪುರ ಜಲಾಶಯ ವ್ಯಾಪ್ತಿಯ ಎಸ್.ಐ. ರಸ್ತೆಯಿಂದ ಕಾನಳ್ಳಿಗೆ ಹೋಗುವ ರಸ್ತೆ ಅಭಿವೃದ್ಧಿ 3.00 ಕಿ.ಮೀ. | 5,95,000/- | 12,000 | 1,000/- | 3ನೇ ದರ್ಜೆ ಮತ್ತು ಮೇಲ್ಪಟ್ಟು |
| 10. | ಅಂಜನಾಪುರ ಜಲಾಶಯ ವ್ಯಾಪ್ತಿಯ ಗ್ರಾಮದಿಂದ ಬೋರ್ಗಲ್ ಹೊಳೆದಾರಿ ಮೂಲಕ ಕುಮದ್ವತಿ ನದಿಗೆ ಹೋಗುವ ರಸ್ತೆ ಅಭಿವೃದ್ಧಿ | 5,95,000/- | 12,000 | 1,000/- | 3ನೇ ದರ್ಜೆ ಮತ್ತು ಮೇಲ್ಪಟ್ಟು |
| 11. | ಅಂಬ್ಲಿಗೊಳ ಜಲಾಶಯ ವ್ಯಾಪ್ತಿಯ ಮದಗ ಹಾರನಹಳ್ಳಿಯಿಂದ ಕುಮದ್ವತಿ ನದಿಗೆ ಹೋಗುವ ರಸ್ತೆ ಅಭಿವೃದ್ಧಿ | 7,95,000/- | 16,000 | 1,000/- | 3ನೇ ದರ್ಜೆ ಮತ್ತು ಮೇಲ್ಪಟ್ಟು |
| 12. | ಅಂಬ್ಲಿಗೊಳ ಜಲಾಶಯ ವ್ಯಾಪ್ತಿಯ 25ನೇ ತೂಬಿನಿಂದ ತುರಬಿಕಟ್ಟೆ ಏರಿ ಮೂಲಕ ಹರಗುವಳ್ಳಿಗೆ ಹೋಗುವ ಐ.ಟಿ. ರಸ್ತೆ ಅಭಿವೃದ್ಧಿ 2.50 ಕಿ.ಮೀ. | 5,95,000/- | 12,000 | 1,000/- | 3ನೇ ದರ್ಜೆ ಮತ್ತು ಮೇಲ್ಪಟ್ಟು |
| 13. | ಅಂಬ್ಲಿಗೊಳ ಜಲಾಶಯ ವ್ಯಾಪ್ತಿಯ ಬನ್ನೂರಿನಿಂದ ಅಣ್ಣಾಪುರ ದೊಡ್ಡಬ್ಯಾಣ ಐ.ಟಿ. ರಸ್ತೆ ಅಭಿವೃದ್ಧಿ | 5,95,000/- | 12,000 | 1,000/- | 3ನೇ ದರ್ಜೆ ಮತ್ತು ಮೇಲ್ಪಟ್ಟು |
| 14. | ಅಂಬ್ಲಿಗೊಳ ಜಲಾಶಯ ವ್ಯಾಪ್ತಿಯ ತುಮರಿ ಹೊಸೂರಿನಿಂದ ಕುಮದ್ವತಿ ನದಿಗೆ ಹೋಗುವ ರಸ್ತೆ ಅಭಿವೃದ್ಧಿ. | 5,95,000/- | 12,000 | 1,000/- | 3ನೇ ದರ್ಜೆ ಮತ್ತು ಮೇಲ್ಪಟ್ಟು |

**ಸೂಚನೆಗಳು:**

1. ನಿಗದಿತ ಟೆಂಡರ್ ಫಾರಂನಲ್ಲಿ ಕಾಮಗಾರಿಯ ವಿವರಗಳನ್ನು ಮತ್ತು ಟೆಂಡರಿನ ಷರತ್ತುಗಳನ್ನು ಒದಗಿಸಲಾಗಿದೆ. ಟೆಂಡರುದಾರರು ಹಾಕುವಾಗ ಪಾಲಿಸಬೇಕಾಗಿರುವ ನಿಬಂಧನೆಗಳನ್ನು ಸಹ ಒದಗಿಸಲಾಗಿದೆ. ಅದರಂತೆ ಟೆಂಡರ್ ಹಾಕಬೇಕು.
2. ಇ.ಎಂ.ಡಿ. ಮೊತ್ತವನ್ನು ಡಿಮ್ಯಾಂಡ್ ಡ್ರಾಫ್ಟ್, ಬ್ಯಾಂಕರ್ಸ್ ಚೆಕ್, ಎಫ್.ಡಿ.ಆರ್., ಟಿ.ಡಿ.ಆರ್. ಮತ್ತು ಬ್ಯಾಂಕ್ ಗ್ಯಾರಂಟಿಗಳನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಮಾತ್ರ ಸೂಚಿಸಿರುವ ಮೊತ್ತಕ್ಕೆ ಕಾರ್ಯಪಾಲಕ ಇಂಜಿನಿಯರ್ ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ ಭದ್ರಾವತಿ ಇವರ ಹೆಸರಿನಲ್ಲಿ ಪಾವತಿಸಿರಬೇಕು. ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟನ್ನು ಕಾರ್ಯಪಾಲಕ ಇಂಜಿನಿಯರ್ ಹೆಸರಿನಲ್ಲಿ ಪ್ಲೆಡ್ಜ್ ಮಾಡಿರಬೇಕು. ತಪ್ಪಿದಲ್ಲಿ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
3. ಯಾವುದೇ ನಿಬಂಧನೆಗಳನ್ನು ಒಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
4. ಇಂ.ಎಂ.ಡಿ.ಯ ಠೇವಣಿ ಕ್ರಮಬದ್ಧತೆಯು (ವ್ಯಾಲಿಡಿಟಿಪೀರಿಯಡ್) ಟೆಂಡರ್ ತೆರೆದ ದಿನಾಂಕದಿಂದ ತೊಂಭತ್ತು ದಿನಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
5. ಇತ್ತೀಚಿನ ಸೇಲ್ ಟ್ಯಾಕ್ಸ್ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
6. ಟೆಂಡರನ್ನು ಯಾವುದೇ ಕಾರಣವಿಲ್ಲದೆ ಮುಂದೂಡುವ ಸ್ವೀಕರಿಸುವ, ತಿರಸ್ಕರಿಸುವ ಅಧಿಕಾರವು ಕಾರ್ಯಪಾಲಕ ಇಂಜಿನಿಯರ್ ಇವರಿಗೆ ಇರುತ್ತದೆ.
7. ಇಲಾಖಾವತಿಯಿಂದ ಯಾವುದೇ ಕಾಮಗಾರಿ ನಿರ್ಮಾಣ ವಸ್ತುಗಳನ್ನು ವಿತರಿಸಲಾಗುವುದಿಲ್ಲ. ಗುತ್ತಿಗೆದಾರರೇ ಸ್ವಂತ ಏರ್ಪಾಟು ಮಾಡಿಕೊಳ್ಳತಕ್ಕದ್ದು.
8. ಜೇಷ್ಠತೆಯ ಆಧಾರದ ಮೇಲೆ ಗುತ್ತಿಗೆದಾರರ ಬಿಲ್ಲುಗಳನ್ನು ಪಾವತಿಸಲಾಗುವುದು.
9. ಖಾಲಿ ಟೆಂಡರ್ ಪುಸ್ತಕವನ್ನು ಖರೀದಿಸಿ ಕ್ರಮಬದ್ಧವಾಗಿ ಇ.ಎಂ.ಡಿ.ಯನ್ನು ಭರಿಸದೆ ಟೆಂಡರ್ ಹಾಕಿದಲ್ಲಿ, ದರಗಳನ್ನು ಸೂಚಿಸದೇ ಟೆಂಡರ್ ಹಾಕಿದಲ್ಲಿ ಮತ್ತು ಟೆಂಡರ್ ಪುಸ್ತಕವನ್ನು ಹಾಕದೆ ಇದ್ದಲ್ಲಿ, ಈ ರೀತಿ ಮೂರು ಬಾರಿ ಪುನರಾವರ್ತನೆ ಮಾಡಿದ ಗುತ್ತಿಗೆದಾರರು ಮುಂದಿನ ಟೆಂಡರ್‌ಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ ಹಾಗೂ ಅಂತಹ ಗುತ್ತಿಗೆದಾರರ ಬಗ್ಗೆ ನೊಂದಣಿ ಪ್ರಾಧಿಕಾರಕ್ಕೆ ವರದಿ ಸಲ್ಲಿಸಲಾಗುವುದು.

**ಎಸ್.ಹೆಚ್. ಮಂಜಪ್ಪ**

ಪಿ.ಆರ್.90

ಕಾರ್ಯಪಾಲಕ ಅಭಿಯಂತರರು,
ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಛೇರಿ, ಮಂಡ್ಯ ವಿಭಾಗ, ಮಂಡ್ಯ

## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂಖ್ಯೆ: ಎಸ್‌ಎಎಸ್/ ಮರ ಹರಾಜು/ ಸಿಆರ್-17/ 06-07, ದಿನಾಂಕ:6ನೇ ಫೆಬ್ರವರಿ, 2007**

ಈ ಮೂಲಕ ಸಮಸ್ತ ಜನರಿಗೆ ತಿಳಿಸುವುದೇನೆಂದರೆ, ಮಂಡ್ಯ ವಿಭಾಗ ವ್ಯಾಪ್ತಿಯ ನಾಗಮಂಗಲ, ಕೆ.ಆರ್.ಪೇಟೆ, ಪಾಂಡವಪುರ, ಮದ್ದೂರು, ಶ್ರೀರಂಗಪಟ್ಟಣ ಮತ್ತು ಮಂಡ್ಯ ವಲಯಗಳಲ್ಲಿ ಇಲಾಖಾ ನೀಲಗಿರಿ ನೆಡುತೋಪುಗಳಲ್ಲಿ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ, ಮೈಸೂರು ರವರು ನೀಲಗಿರಿ ಮರಗಳನ್ನು ಕಠಾವಣೆ ಮಾಡಿ ಇಲಾಖೆಗೆ ಹಸ್ತಾಂತರಿಸಿದ್ದು, ಸದರಿ ಉತ್ಪನ್ನಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಅವರಿಂದ

ನಿಯೋಜಿಸಲ್ಪಟ್ಟ ಅಧಿಕಾರಿಗಳಿಂದ ಈ ಕೆಳಕಂಡ ಸ್ಥಳ ಹಾಗೂ ದಿನಾಂಕದಂದು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಇಚ್ಛೆಯುಳ್ಳ ಖರೀದಿದಾರರು ಹರಾಜಿನಲ್ಲಿ ಭಾಗವಹಿಸಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಉತ್ಪನ್ನವನ್ನು ಖರೀದಿಸಬಹುದಾಗಿರುತ್ತದೆ.

| ಕ್ರ. ಸಂ. | ವಲಯ | ಹರಾಜಿಗೆ ಇಡಲಾಗಿರುವ ಉತ್ಪನ್ನದ ವಿವರಗಳು | ಅಂದಾಜು ಪರಿಮಾಣ | ಹರಾಜು ದಿನಾಂಕ ಮತ್ತು ವೇಳೆ | ಹರಾಜು ನಡೆಯುವ ಸ್ಥಳ |
|---|---|---|---|---|---|
| 1 | 2 | 3 | 4 | 5 | 6 |
| 1. | ನಾಗಮಂಗಲ | ನೀಲಗಿರಿ ನಾಟಾ<br>ನೀಲಗಿರಿ ಸರಗಳು | $40.000M^3$<br>3300 ಸಂಖ್ಯೆ | ದಿನಾಂಕ:12.03.2007<br>ಬೆ:11.00 ಗಂಟೆಗೆ | ನಾಗಮಂಗಲ ವಲಯದ ಕಾಚೇನಹಳ್ಳಿ ಸಸ್ಯಕ್ಷೇತ್ರದ ಆವರಣ. |
| | | ನೀಲಗಿರಿ ಸರಗಳು | 5000 ಸಂಖ್ಯೆ | ದಿನಾಂಕ:13.03.2007<br>ಬೆ:11.00 ಗಂಟೆಗೆ | ನಾಗಮಂಗಲ ವಲಯದ ಹೊನ್ನಬೆಟ್ಟ ಸಸ್ಯಕ್ಷೇತ್ರದ ಆವರಣ |
| 2. | ಕೆ.ಆರ್.ಪೇಟೆ | ನೀಲಗಿರಿ ನಾಟಾ<br>ನೀಲಗಿರಿ ಸರಗಳು | $17.000\ M^3$<br>253 ಸಂಖ್ಯೆ | ದಿನಾಂಕ:14.03.2007<br>ಬೆ:11.00 ಗಂಟೆಗೆ | ಅರಣ್ಯ ರಕ್ಷಕರ ವಸತಿ ಗೃಹ ಆವರಣ, ಸಂತೆ ಬಾಚಳ್ಳಿ ಕೆ.ಆರ್.ಪೇಟೆ ತಾಲ್ಲೂಕು. |
| | | ನೀಲಗಿರಿ ಸರಗಳು | 4000 ಸಂಖ್ಯೆ | | |
| 3. | ಪಾಂಡವಪುರ | ನೀಲಗಿರಿ ನಾಟಾ | $33.000\ M^3$ | ದಿನಾಂಕ:15.03.2007<br>ಬೆ:11.00 ಗಂಟೆಗೆ | ಪಾಂಡವಪುರ ವಲಯದ ಮೇಲುಕೋಟೆ ವಿಶ್ರಾಂತಿ ಗೃಹದ ಆವರಣ |
| 4. | ಮದ್ದೂರು | ನೀಲಗಿರಿ ಸರಗಳು | 440 ಸಂಖ್ಯೆ | ದಿನಾಂಕ:15.03.2007<br>ಮ:03..00 ಗಂಟೆಗೆ | ಮದ್ದೂರು ವಲಯ ಕಛೇರಿ ಆವರಣದಲ್ಲಿ |
| 5. | ಶ್ರೀರಂಗಪಟ್ಟಣ | ನೀಲಗಿರಿ ಸರಗಳು | 7000 ಸಂಖ್ಯೆ | ದಿನಾಂಕ:16.03.2007<br>ಬೆ:11.00 ಗಂಟೆಗೆ | ಕೆ.ಶೆಟ್ಟಿಹಳ್ಳಿ ವಿಶ್ರಾಂತಿ ಗೃಹದ ಆವರಣ |
| 6. | ಮಂಡ್ಯ | ನೀಲಗಿರಿ ಸರಗಳು<br>ನೀಲಗಿರಿ ನಾಟಾ | 7400 ಸಂಖ್ಯೆ<br>9.998 ಘಮೀ. | ದಿನಾಂಕ:17.03.2007<br>ಬೆ:11.00 ಗಂಟೆಗೆ | ಇಂಡುವಾರು ಪ್ರಕೃತಿ ಉದ್ಯಾನವನ |

**ಸರ್ಕಾರಿ ಆಜ್ಞೆಯ ಸಂಖ್ಯೆ: ಎಇಇ 115 ಎಪಿಪಿ 2001 ಬೆಂಗಳೂರು, ದಿನಾಂಕ:07.02.2004 ರನ್ವಯ ಬಹಿರಂಗ ಹರಾಜಿಗೆ ಅನ್ವಯವಾಗುವ ಹರಾಜು ಷರತ್ತುಗಳು**

1. ಲಾಟುಗಳಲ್ಲಿ ಒಳಗೊಂಡ ದಿಮ್ಮಿ, ಕೊರೆದ ಕಟ್ಟಿಗೆಗಳ ಕುರಿತು ಅವುಗಳ ಸಂಖ್ಯೆ ಹಾಗೂ ಪರಿಮಾಣಗಳನ್ನು ಘ.ಮೀ.ಗಳಲ್ಲಿ ನಮೂದಿಸಲಾಗುವುದು. ಎಳೆಗಳಿದ್ದಲ್ಲಿ ಅವುಗಳ ಸಂಖ್ಯೆಗಳನ್ನು ನಮೂದಿಸಲಾಗುವುದು. ಖರೀದಿದಾರರ ಬೇಡಿಕೆಯು ಸಂಬಂಧಿಸಿದ ಲಾಟಿನ ಮಾಲಿಗೆ ಮಾತ್ರ ಸೀಮಿತವಾಗಿರುತ್ತದೆ.
2. ಇಲಾಖೆಯ ಅಳತೆ ಹಾಗೂ ವರ್ಗೀಕರಣ ಅಂತಿಮವಾಗಿದ್ದು, ಇಚ್ಛೆಯುಳ್ಳ ಖರೀದಿದಾರರು ಅವುಗಳನ್ನು ಹರಾಜಿನ ಪೂರ್ವದಲ್ಲಿಯೇ ಪರೀಕ್ಷಿಸಿ ಖಚಿತಪಡಿಸಿಕೊಳ್ಳತಕ್ಕದ್ದು. ಈ ಕುರಿತು ಹರಾಜಿನ ನಂತರ ಬರಬಹುದಾದ ದೂರುಗಳನ್ನು ಪರಿಗಣಿಸಲಾಗುವುದಿಲ್ಲ.
3. ಮಾಲಿನ ವರ್ಣನೆ, ಪ್ರಮಾಣ ಟೊಳ್ಳು ಹಾಗೂ ಕಡಿಮೆ ಕುರಿತು ಹರಾಜಿನ ನಂತರ ಯಾವುದೇ ದೂರುಗಳು ಬಂದಲ್ಲಿ ಪರಿಗಣಿಸಲಾಗುವುದಿಲ್ಲ. ಹಾಗೂ ಈ ಕುರಿತು ಯಾವುದೇ ಹಕ್ಕನ್ನು ಪರಿಗಣಿಸಲಾಗುವುದಿಲ್ಲ.
4. ಹರಾಜು ನಡೆಸುವ ಅಧಿಕಾರಿಯು ಹರಾಜಿನ ವೇಳೆಯ ಬದಲಾವಣೆ ಅಧಿಕಾರವನ್ನು ಕಾಯ್ದಿರಿಸಿಕೊಂಡಿರುತ್ತಾರೆ. ಅಂತಹ ಬದಲಾವಣೆಗಳಿದ್ದಲ್ಲಿ ಸವಾಲಿನ ಸಮಯದಲ್ಲಿ ತಿಳಿಸಲಾಗುವುದು.
5. ತಪ್ಪಿತಸ್ಥರು ಹಾಗೂ ಕಪ್ಪು ಪಟ್ಟಿಯಲ್ಲಿ ಸೇರ್ಪಡೆಯಾದ ಖರೀದಿದಾರರು ಮತ್ತು ಅಪ್ರಾಪ್ತ ವಯಸ್ಕರಿಗೆ ಹರಾಜಿನಲ್ಲಿ ಭಾಗವಹಿಸಲು ನಿರ್ಬಂಧಿಸಲಾಗಿದೆ.
6. ಆಸಕ್ತ ಖರೀದಿದಾರರು ಈ ಕೆಳಗೆ ನಮೂದಿಸಿದ ಪ್ರಮಾಣದಲ್ಲಿ ಇ.ಎಂ.ಡಿ. ಮೊತ್ತವನ್ನು ರಾಷ್ಟ್ರೀಕೃತ ಅಥವಾ ಲೋಕಲ್ ಷೆಡ್ಯೂಲ್ ಬ್ಯಾಂಕುಗಳ ಡಿಮಾಂಡ್ ಡ್ರಾಫ್ಟನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ 3 ಪದನಾಮದಲ್ಲಿ ತೆಗೆದು ಸವಾಲಿನ ಪೂರ್ವದಲ್ಲಿ ನಡೆಸುವ ಅಧಿಕಾರಿಗಳ ಬಳಿಯಲ್ಲಿ ನೀಡಬೇಕು. ಹೀಗೆ ನೀಡಲಾದ ಇ.ಎಂ.ಡಿ. ಮೊತ್ತವನ್ನು ಯಶಸ್ವಿ ಬಿಡ್ಡುದಾರರು ಖರೀದಿಸಲಾಗುವ ಮರಮುಟ್ಟುಗಳ ಮೌಲ್ಯದ 1/4 ಭಾಗದ ಹಣಕ್ಕೆ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

   ಇ.ಎಂ.ಡಿ. ಮೊತ್ತ ಒಟ್ಟು ಮಾಲಿನ ಬೆಲೆ 20,000.00 ಇದ್ದಲ್ಲಿ ರೂ.5,000.00 ರೂ. ಮೀರಿದಲ್ಲಿ ರೂ.20,000.00.
7. ನೋಂದಾಯಿತ ಕಂಪನಿ, ಸಂಸ್ಥೆ ಹಾಗೂ ಕಾರ್ಪೋರೇಷನ್‌ಗಳನ್ನು ಹೊರತುಪಡಿಸಿ ಜಂಟಿಯಾಗಿ ನೀಡಲ್ಪಡುವ ಇ.ಎಂ.ಡಿ. ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ.
8. ಇತರರ ಪರವಾಗಿ ಸವಾಲಿನಲ್ಲಿ ಭಾಗವಹಿಸಲು ಇಚ್ಛಿಸುವ ಏಜೆಂಟರು ಸಂಬಂಧಿಸಿದವರಿಂದ ಪವರ್ ಆಫ್ ಅಟಾರ್ನಿ ಪತ್ರವನ್ನು ಪಡೆದು ಸವಾಲು ನಡೆಸುವ ಅಧಿಕಾರಿಯ ಬಳಿಯಲ್ಲಿ ಕೊಡಬೇಕು.
9. ಇತರರ ಪರವಾಗಿ ಸವಾಲಿನಲ್ಲಿ ಭಾಗವಹಿಸಲು ಇಚ್ಛಿಸುವ ಏಜೆಂಟರು ಸವಾಲು ನಡೆಸುವ ಅಧಿಕಾರಿಯ ಬಳಿ ಅಧಿಕಾರ ಪತ್ರವನ್ನು ನೀಡಬೇಕು.
10. ಸವಾಲಿನಲ್ಲಿ ಮರುಮಟ್ಟುಗಳನ್ನು ಖರೀದಿಸಲು ಇಚ್ಛಿಸುವ ಕಂಪನಿ, ಸಂಸ್ಥೆ ಹಾಗೂ ಕಾರ್ಪೋರೇಷನ್‌ಗಳು ಪರವಾಗಿ ಸವಾಲಿನಲ್ಲಿ ಭಾಗವಹಿಸುವ ವ್ಯಕ್ತಿಗೆ ಅಧಿಕಾರ ಪತ್ರವನ್ನು (ಪವರ್ ಆಫ್ ಅಟಾರ್ನಿ) ನೀಡಬೇಕು.
11. ಅಯಶಸ್ವಿ ಖರೀದಿದಾರರು ನೀಡದ ಇ.ಎಂ.ಡಿ. ಮೊತ್ತವನ್ನು ಹರಾಜು ಮುಕ್ತಾಯದ ನಂತರ ಆ ದಿನವೇ ಹಿಂತಿರುಗಿಸಲಾಗುವುದು.

12. ಸಾಮಾನ್ಯವಾಗಿ ಸವಾಲಿನಲ್ಲಿ ಹೆಚ್ಚಿನ ಬಿಡ್ ಮಾಡಿದಂತಹ ವ್ಯಕ್ತಿಯೇ ಖರೀದಿದಾರರಾಗಿರುತ್ತಾರೆ. ಮಾರಾಟ ನಿರ್ವಹಣಾ ಅಧಿಕಾರಿಯು ಯಾವುದೇ ಕಾರಣವನ್ನು ನೀಡದೇ ಅಂತಹ ಬೇಡಿಕೆಯನ್ನು ತಿರಸ್ಕರಿಸುವ ಅಥವಾ ಸವಾಲು ಸ್ಥಗಿತಗೊಳಿಸುವ ಅಧಿಕಾರವನ್ನು ಹೊಂದಿರುತ್ತಾರೆ.

13. ಖರೀದಿದಾರರ ಹೆಸರಿನಲ್ಲಿ ಸವಾಲು ತೀರ್ಮಾನಗೊಂಡಾಗ ಲಾಟ್ ನಂಬರ್, ಮರದ ಜಾತಿ, ದಿಮ್ಮಿಗಳ ಸಂಖ್ಯೆ ಹಾಗೂ ಪರಿಮಾಣಗಳನ್ನೊಳಗೊಂಡ ವಿವರಗಳುಳ್ಳ ಬಿಕರಿ ಚೀಟಿಯ ಮೇಲೆ ಖರೀದಿದಾರರು ತಮ್ಮ ಪೂರ್ಣ ವಿಳಾಸವನ್ನು ನಮೂದಿಸಿ ರುಜು ಮಾಡುವುದು ಕಡ್ಡಾಯ, ಈ ಪ್ರಕ್ರಿಯೆಯಿಂದ ಖರೀದಿದಾರರು ಮರ ಖರೀದಿ ಕುರಿತಾದ ಎಲ್ಲ ಷರತ್ತುಗಳಿಗೆ ಒಪ್ಪಿದ್ದಾರೆಂದು ಭಾವಿಸಿ ಸವಾಲು ತೀರ್ಮಾನಗೊಂಡಿರುವುದಾಗಿ ತಿಳಿಸಲಾಗುವುದು.

14. ಸವಾಲುದಾರರ ಸವಾಲು ಅವರ ಪರವಾಗಿ ತೀರ್ಮಾನಗೊಂಡಾಗ ಈ ಮೇಲಿನ ಕಂಡಿಕೆ 4.1 ರಲ್ಲಿ ನಮೂದಿಸಿದಂತೆ ಸವಾಲಿನ ಮೊತ್ತದ 1/4 ಭಾಗ ಹಣ ಹಾಗೂ ಪ್ರಚಲಿತದಲ್ಲಿರುವ ಪೂರ್ಣ ತೆರಿಗೆಯನ್ನು ಸವಾಲಿನ ದಿನದಂದೇ ಪಾವತಿಸಬೇಕು. ಹಾಗೂ ಕಂಡಿಕೆ 9-2 ರಲ್ಲಿ ನಮೂದಿಸಿದಂತೆ ಸಂದಾಯ ಮಾಡಬಹುದಾದ ಮೊತ್ತವನ್ನು ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಸ್ಥಳೀಕವಾಗಿ ಪಾವತಿಗೊಳ್ಳುವಂತೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಪದನಾಮದಲ್ಲಿ ರಾಷ್ಟ್ರೀಕೃತ ಬ್ಯಾಂಕ್/ ಶೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದು ಸಲ್ಲಿಸಬೇಕು. ಪಾವತಿಸಬಹುದಾದ ಮೊತ್ತ ರೂ.20,000.00 ಮೀರದಿದ್ದಲ್ಲಿ ಸವಾಲಿನ ದಿನದಂದೇ ನಗದು ರೂಪದಲ್ಲಿ ಪಾವತಿಸಬಹುದು.

15. ಈ ಮೇಲೆ ನಮೂದಿಸಿದಂತೆ ಪಾವತಿಸಬಹುದಾದ ಮೊತ್ತವನ್ನು ಸವಾಲು ಮುಕ್ತಾಯಗೊಂಡಾಗ ಸವಾಲಿನ ದಿನದಂದು ಅಥವಾ ಮರುದಿನ ಪಾವತಿಸದಿದ್ದಲ್ಲಿ ಸವಾಲಿನ ಕುರಿತು ಇಟ್ಟಂತಹ ಇ.ಎಂ.ಡಿ. ಮೊತ್ತ ಹಾಗೂ ಇನ್ನಿತರೇ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಂತಹ ಮರಮುಟ್ಟುಗಳನ್ನು ಕೂಡಲೇ ಮರು ಹರಾಜು ಮಾಡಲಾಗುವುದು.

16. ದೋನ್ವಾರ್ ಲಾಟುಗಳ ಸವಾಲು ಸಂಬಂಧಿಸಿದ ಮೇಲಾಧಿಕಾರಿಗಳಿಂದ ಅಂಗೀಕೃತಗೊಂಡಾಗ ಸಂಬಂಧಿಸಿದ ಯಶಸ್ವಿ ಸವಾಲುದಾರರಿಗೆ 30 ದಿನಗಳೊಳಗಾಗಿ ನೋಂದಾಯಿತ ಅಂಚೆ ಸ್ವೀಕೃತಿ ಪತ್ರದ ಮೂಲಕ ತಿಳಿಸಲಾಗುವುದು. ಸದರಿ ಅವಧಿಯಲ್ಲಿ ಅಂಚೆ ಮುಖಾಂತರ ರವಾನೆ ಅವಧಿ ಕೂಡ ಒಳಗೊಂಡಿರುತ್ತದೆ. ಈ ಅವಧಿಯಲ್ಲಿ ಸವಾಲುದಾರರು ತಮ್ಮ ಬೇಡಿಕೆಯನ್ನು ಹಿಂತೆಗೆದುಕೊಳ್ಳಲು ಬರುವುದಿಲ್ಲ.

17. ಮಾರಾಟ ಪ್ರಕ್ರಿಯೆಯು ಸವಾಲು ದೃಢೀಕರಣಗೊಳ್ಳುವುದು ಅರ್ಹ ಅಧಿಕಾರಿಗಳ ವಿವೇಚನೆಗೆ ಒಳಪಟ್ಟಿರುತ್ತದೆ. ಅವರು ಯಾವುದೇ ಕಾರಣವನ್ನು ನೀಡದೇ ಅದನ್ನು ಅಂಗೀಕಾರ ಅಥವಾ ತಿರಸ್ಕಾರ ಮಾಡಬಹುದಾಗಿರುತ್ತದೆ.

18. ಯಶಸ್ವಿ ಸವಾಲುದಾರರ ಬೇಡಿಕೆಯು ಅವರು ಪಾವತಿಸಿದಂತಹ ಇ.ಎಂ.ಡಿ. ಮೊತ್ತ ಮೀರದಿದ್ದಲ್ಲಿ, ಅಂತಹ ಸಾಲಿನ ಮೊತ್ತವನ್ನು ಇ.ಎಂ.ಡಿ. ಮೊತ್ತದಿಂದ ಹೊಂದಾಣಿಕೆ ಮಾಡಿಕೊಂಡು ಮಿಕ್ಕ ಹಣವನ್ನು ಹಿಂದಿರುಗಿಸಲಾಗುವುದು.

19. ತೀನ್ವಾರ್‌ಗೊಂಡಂತಹ ಲಾಟುಗಳ 3/4 ಭಾಗ ಮೊತ್ತವನ್ನು ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕುಗಳಿಂದ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಪಡೆದು ಸವಾಲು ದಿನಾಂಕದಿಂದ 60 ದಿನಗಳೊಳಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸಂದಾಯ ಮಾಡುವುದು ಕಡ್ಡಾಯ. ಅದೇ ರೀತಿಯಲ್ಲಿ ದೋನ್ವಾರ್ ಲಾಟುಗಳ 3/4 ಭಾಗ ಮೊತ್ತವನ್ನು ಸವಾಲು ದಿನಾಂಕದಿಂದ 60 ದಿನದೊಳಗೆ ಪಾವತಿಸಬೇಕು. ಹೀಗೆ ಮಾಡದಿದ್ದಲ್ಲಿ ಸವಾಲಿನ ಕುರಿತು ಇಟ್ಟಂತಹ ಖರೀದಿ ಮೊಬಲಗಿನ 3/4 ಭಾಗ ಹಾಗೂ ಇತರ ಶಿಲ್ಕುಗಳ ಮತ್ತು ತೆರಿಗೆಗಳ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಅಂತಹ ಲಾಟುಗಳು ಕುರಿತು ಖರೀದಿದಾರರಿಗೆ ಯಾವುದೇ ತಿಳುವಳಿಕೆ ನೋಟೀಸನ್ನು ನೀಡದೆ ಆದಷ್ಟು ಬೇಗನೆ ಮರು ಸವಾಲು ಮಾಡಲಾಗುವುದು. ಅಂತಹ ಲಾಟುಗಳ ಮರು ಹರಾಜಿನಿಂದ ಲಾಭವಾದಲ್ಲಿ ಅದಕ್ಕೆ ಸವಾಲುದಾರರು ಯಾವ ರೀತಿಯಲ್ಲಿ ಅರ್ಹರಿರುವುದಿಲ್ಲ.

20. ಖರೀದಿಸಿದಿ ಮೊತ್ತವನ್ನು ಡಿಮಾಂಡ್ ಡ್ರಾಫ್ಟ್ ಮೂಲಕ ಕೊಡಲ್ಪಟ್ಟಾಗ ಅಂತಹ ಡಿಮಾಂಡ್ ಡ್ರಾಫ್ಟ್ ಡಿಪೋ ಕಛೇರಿಯಲ್ಲಿ ಸ್ವೀಕೃತಗೊಂಡ ದಿನವನ್ನೇ ಪಾವತಿಸಿದ ದಿನವೆಂದು ಮರ ಖರೀದಿ ವ್ಯವಹಾರ ಕುರಿತಂತೆ ಪರಿಗಣಿಸಲಾಗುವುದು. ಇಂತಹ ಡಿಮಾಂಡ್ ಡ್ರಾಫ್ಟ್‌ಗಳ ನಗದೀಕರಣಕ್ಕೆ ಸಂಬಂಧಿಸಿದ ಆಕಸ್ಮಿಕ ವೆಚ್ಚಗಳನ್ನು ಸರ್ಕಾರವೇ ಭರಿಸುವುದು.

21. ಸರ್ಕಾರಿ ಖಜಾನೆಗೆ ಹಣ ಜಮಾ ಆಗಿರುವುದನ್ನು ದೃಢಪಟ್ಟ ಮೇಲೆ ಮರಮುಟ್ಟುಗಳನ್ನು ಎತ್ತಿ ಸಾಗಿಸಲು ಬಿಡುಗಡೆಗೆ ಅನುಮತಿಸಲಾಗುವುದು. ಯಾವುದೇ ಕಾರಣಕ್ಕೂ ಡಿಮಾಂಡ್ ಡ್ರಾಫ್ಟ್ ಡಿಪೋ ಕಛೇರಿಯಲ್ಲಿ ಸ್ವೀಕೃತಿಗೊಂಡಂತೆ ತಡಮಾಡದೇ 10 ದಿನಗಳೊಳಗಾಗಿಯೇ ಎತ್ತಿ ಸಾಗಿಸಲು ಬಿಡಲಾಗುವುದು.

22. ಮೇಲೆ ನಮೂದಿಸಿದ ಷರತ್ತುಗಳ ಉಲ್ಲಂಘನೆ ಮಾಡಿ ಪಾವತಿಸಲಾದ ಮೊತ್ತಕ್ಕೆ ಇಲಾಖೆಯು ಜವಾಬ್ದಾರಿಯಾಗುವುದಿಲ್ಲ.

23. ಮರ ಖರೀದಿ ಕುರಿತಾಗಿ ಪಾವತಿಸಬೇಕಾಗಿರುವ 3/4 ಭಾಗ ಹಣ ಪಾವತಿಸಲು ಕೊನೆಗೊಳ್ಳುವ ದಿನಾಂಕವನ್ನು ಖರೀದಿದಾರರಿಗೆ ತಿಳಿಸಲಾಗುವುದಿಲ್ಲ. ಸದರಿ ಅವಧಿಯನ್ನು ಮರ ಖರೀದಿದಾರರೇ ಗಮನಿಸಿ, ನಿಗದಿತ ಅವಧಿಯೊಳಗೆ ಪಾವತಿಸಬೇಕು.

24. ಖರೀದಿಸಿದ ಹಾಗೂ ಹಣ ಪಾವತಿ ಮಾಡಲ್ಪಟ್ಟ ಮರುಮುಟ್ಟುಗಳನ್ನು ಸಾಗಾಣಿಕೆ ಡಿಪೋದಿಂದ ಖರೀದಿದಾರರೇ ಸಾಗಾಣಿಕೆ ಮಾಡಿಕೊಳ್ಳುವುದು.

25. ಪೂರ್ತಿ ಹಣ ಪಾವತಿ ಮಾಡಲ್ಪಟ್ಟ ಹಾಗೂ ಸಾಗಾಣಿಕೆಗೆ ಬಿಡುಗಡೆ ಆದೇಶ ನೀಡಿದ ಮೇಲೆ ಸಾಗಾಣಿಕೆ ಮಾಡಿಕೊಳ್ಳದಿದ್ದ ಮರಮುಟ್ಟುಗಳು ಕಳುವಿನಿಂದ, ಬೆಂಕಿಯಿಂದ ಇತರೇ ನೈಸರ್ಗಿಕ ವಿಕೋಪಗಳಿಂದ ಯಾವುದೇ ರೀತಿಯಲ್ಲಿ ನಾಶಗೊಂಡಲ್ಲಿ ಇದಕ್ಕೆ ಸರ್ಕಾರವು ಜವಾಬ್ದಾರಿಯಾಗಿರುವುದಿಲ್ಲ. ಬಿಡುಗಡೆ ಆದೇಶದ ದಿನಾಂಕದ ತರುವಾಯ ಮರ ಡಿಪೋವಿನಲ್ಲಿ ಇಟ್ಟಿದ್ದರೂ ಖರೀದಿದಾರರು ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

26. ಷರತ್ತು 13-1 ರಲ್ಲಿ ನಿಗದಿಪಡಿಸಿದ್ದ ಅವಧಿ ಕುರಿತಂತೆ ಖರೀದಿದಾರರು ಆಗಾಗ್ಗೆ ಪಾವತಿಸಬಹುದಾದ ಒಟ್ಟು ಮೊತ್ತದ ಭಾಗಶಃ ಹಣವನ್ನು ಸಾಗಿಸಿಕೊಳ್ಳಬೇಕೆಂದಿರುವ ಲಾಟುಗಳಿಗೆ ಸಮಾನವಾದ ಪೂರ್ತಿ ಹಣವನ್ನು ವಿಕ್ರಯ (ಬಿಕರಿ) ಚೀಟಿಯಲ್ಲಿ ನಮೂದಿಸಿದಂತೆ ಪಾವತಿಸಿ ಇಚ್ಛಿಸಿದ ಲಾಟುಗಳನ್ನು ತೆಗೆದುಕೊಂಡು ಹೋಗಬಹುದಾಗಿದೆ. ಸವಾಲು ದಿನದಂದು ಪಾವತಿಸಲಾದ 3/4 ಭಾಗ ಹಣವನ್ನು ಕೊನೆಯದಾಗಿ ಮರಮುಟ್ಟುಗಳನ್ನು ಸಾಗಿಸುವ ಸಮಯದಲ್ಲಿ ಹೊಂದಾಣಿಕೆ ಮಾಡಿಕೊಳ್ಳಲಾಗುವುದು. ಒಂದು ಲಾಟಿನ ಭಾಗಶಃ ಮಾಲನ್ನು ಬಿಡುಗಡೆಗೊಳಿಸಲಾಗುವುದಿಲ್ಲ. ಹಾಗೂ ಲಾಟುಗಳ ಪೂರ್ತಿ ಹಣವನ್ನು ಪಾವತಿಸಿಕೊಳ್ಳದೇ ಲಾಟುಗಳನ್ನು ಬಿಡುಗಡೆಗೊಳಿಸಲಾಗುವುದಿಲ್ಲ.

27. ಖರೀದಿಸಲಾದ ಮರುಮುಟ್ಟುಗಳನ್ನು ಈ ಕೆಳಗೆ ನಮೂದಿಸಿದ ಅಂಶಗಳಿಗೊಳಪಟ್ಟು ಸಾಗಿಸಲು ಅನುಮತಿ ನೀಡಲಾಗುವುದು.
    1. ಮರಮುಟ್ಟುಗಳ ಮೇಲೆ ಡಿಪೋ ಅಧಿಕಾರಿಗಳಿಂದ ಖರೀದಿ ಛಪ್ಪಾ (ಮುದ್ರೆ) ಹಾಕುವುದು.
    2. ಡಿಪೋ ಅಧಿಕಾರಿಗಳಿಂದ ನೀಡಲ್ಪಡುವ ನಿಗದಿತ ನಮೂನೆಯಲ್ಲಿಯ ರಹದಾರಿ ಪಾಸ.
    3. ಡಿಪೋ ಅಧಿಕಾರಿಗಳಿಂದ ನೀಡಲ್ಪಡುವ ನಿಗದಿತ ನಮೂನೆಯಲ್ಲಿಯ ರಹದಾರಿ ಪಾಸ.
28. ಖರೀದಿಸಿದ ಹಣ ಪಾವತಿ ಮಾಡಿದ ಹಾಗೂ ಬಿಡುಗಡೆಗೊಳಿಸಲಾದ ಮರಮುಟ್ಟುಗಳನ್ನು (90) ತೊಂಭತ್ತು ದಿನಗಳೊಳಗಾಗಿ ಸಾಗಿಸಿಕೊಳ್ಳತಕ್ಕದ್ದು. ಹೀಗೆ ಮಾಡದಿದ್ದಲ್ಲಿ ಈ ಕುರಿತು ಪಾವತಿಸಲಾದ ಎಲ್ಲಾ ಮೊತ್ತ ಹಾಗೂ ಸಾಗಿಸಿಕೊಳ್ಳದಿರುವ ಮರಮುಟ್ಟುಗಳನ್ನು ಖರೀದಿದಾರರಿಗೆ ಯಾವುದೇ ತಿಳುವಳಿಕೆ ಪತ್ರವನ್ನು ನೀಡದೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
29. ಸವಾಲು ಮಾಡುವ ಅಧಿಕಾರಿಯು ಈ ಕೆಳಗೆ ನಮೂದಿಸಿದಂತೆ ಮಾರ್ಪಾಡು ಮಾಡುವ ಅಧಿಕಾರವನ್ನು ಕಾಯ್ದಿರಿಸಿಕೊಂಡಿರುತ್ತಾರೆ.
    1.ಸವಾಲಿಗೆ ಇಡಲಾಗಿರುವ ಮರುಮುಟ್ಟುಗಳ ಪ್ರಮಾಣದಲ್ಲಿ ಹೆಚ್ಚು ಅಥವಾ ಕಡಿಮೆ.
    2. ಬೇಡಿಕೆಗನುಗುಣವಾಗಿ ಸವಾಲಿನ ಸಮಯವನ್ನು ನಿಗದಿಗೊಳಿಸುವುದು.
30. ಕೇವಲ ಭಾರತದ ಪೌರತ್ವವನ್ನು ಪಡೆದವರು ಮಾತ್ರ ಹರಾಜಿನಲ್ಲಿ ಭಾಗವಹಿಸತಕ್ಕದ್ದು.
31. ವ್ಯವಹಾರ ಕುರಿತು ಉದ್ಭವಿಸಬಹುದಾದ ಎಲ್ಲಾ ವ್ಯಾಜ್ಯಗಳ ಪರಿಹಾರಕ್ಕೆ ಡಿಪೋ ಮಾರಾಟಗಳನ್ನು ಅಧಿಕಾರ ವ್ಯಾಪ್ತಿ ಹೊಂದಿರುವ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಅವರು ಅಧಿಕಾರವನ್ನು ಹೊಂದಿರುತ್ತಾರೆ. ಅವರ ನಿರ್ಣಯವೇ ಅಂತಿಮವಾದದ್ದು ಹಾಗೂ ಅದಕ್ಕೆ ಬದ್ದವಾಗಿರತಕ್ಕದ್ದು.
32. ಮಾರಾಟಕ್ಕಿಟ್ಟಿರುವ ಉತ್ಪನ್ನಗಳ ಪ್ರಮಾಣವು ಅಂದಾಜಿನದ್ದಾಗಿರುತ್ತದೆ.
33. ಮಾರಾಟಕ್ಕಿಟ್ಟಿರುವ ಉತ್ಪನ್ನಗಳನ್ನು ಬಿಡ್ಡುದಾರರು ಹರಾಜಿನಲ್ಲಿ ಭಾಗವಹಿಸುವ ಮೊದಲೇ ಪ್ರಮಾಣ ಮತ್ತು ಗುಣಮಟ್ಟವನ್ನು ಖಚಿತಪಡಿಸಿಕೊಳ್ಳುವುದು.
34. ಹರಾಜಿನಲ್ಲಿ ತೆರಿಗೆಗಳ ಬಾಬ್ತು ಫಾರಂ ನಂ.27ಡಿ ಕೋರುವವರು ಸಂಬಂಧಪಟ್ಟ ವಲಯ ಅರಣ್ಯ ಅಧಿಕಾರಿಗಳಿಂದಲೇ ಪಡೆದುಕೊಳ್ಳತಕ್ಕದ್ದು.
35. ಸದರಿ ಹರಾಜನ್ನು ಕಾರಣಾಂತರದಿಂದ ಸ್ಥಗಿತಗೊಳಿಸಿದಲ್ಲಿ, ಮುಂದಿನ ವಾರ ಅಂದರೆ ದಿನಾಂಕ: 23.03.07 ರಿಂದ 26.03.07 ರಂದು ಕ್ರಮವಾಗಿ ನಡೆಸಲಾಗುವುದು. (ದಿನಾಂಕ:25.03.07 ರಂದು ಸಾರ್ವತ್ರಿಕ ರಜಾ ದಿನವನ್ನು ಹೊರತುಪಡಿಸಿದೆ)

**ಕೆ.ಎಂ. ನಾರಾಯಣಸ್ವಾಮಿ, ಭಾ.ಅ.ಸೇ.**

ಪಿ.ಆರ್.91

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಮಂಡ್ಯ ವಿಭಾಗ, ಮಂಡ್ಯ.

## ಪ್ರಾಚಾರ್ಯರ ಕಛೇರಿ, ಕೈಗಾರಿಕಾ ತರಬೇತಿ ಸಂಸ್ಥೆ, ತುಮಕೂರು ರಸ್ತೆ, ಬೆಂಗಳೂರು-22

### ಪ್ರಕಟಣೆ

### ಸಂಖ್ಯೆ: ಕೈತಸಂ/ ಬೆಂ-22/ ಖರೀದಿ/ ವಿವಿಧ/ 04-05, ದಿನಾಂಕ:7ನೇ ಫೆಬ್ರವರಿ, 2007

**ವಿಷಯ:** ಸಂಸ್ಥೆಯಲ್ಲಿನ ನಿರುಪಯುಕ್ತ ವಸ್ತುಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ನಿರ್ದೇಶನಾಲಯದ ಕ.ಆ.ಸಂ. ಉತಇ/ ತ/ ಖರೀದಿ-5/ ವಿಲೆ-ವಿವ-16/ 06-07 ದಿನಾಂಕ:23.10.2007

ಸಂಸ್ಥೆಯಲ್ಲಿನ 25 ಸಂಖ್ಯೆಯ ವಿವಿಧ ವಿಧವಾದ ನಿರುಪಯುಕ್ತ ವಸ್ತುಗಳು ಉದಾ: ಎಂ.ಎಸ್, ಸ್ಕ್ರ್ಯಾಪ್, ಅಲ್ಯೂಮಿನಿಯಂ ಸ್ಕ್ರ್ಯಾಪ್, ವುಡ್ ಸ್ಕ್ರ್ಯಾಪ್, ಗ್ರೆಂಡಿಂಗ್ ವೀಲ್ ಸ್ಕ್ರ್ಯಾಪ್, ಹಳೆಯ ಟೈರು ಇನ್ನು ಮುಂತಾದವುಗಳನ್ನು ವಿಲೇಗಾಗಿ ಮಾಡಲು ಕೆಳಕಂಡ ಷರತ್ತುಗಳಂತೆ ಹರಾಜು ಹಾಕಲಾಗುವುದು.

1. ಹರಾಜಿನ ದಿನಾಂಕ:22.03.2007ರಂದು ಬೆಳಿಗ್ಗೆ 11.00 ಗಂಟೆಗೆ ಸಂಸ್ಥೆಯ ಉಗ್ರಾಣದಲ್ಲಿ ಜರುಗುತ್ತದೆ.
2. ಅಂದಾಜು ಬೆಲೆಗಿಂತ ಹೆಚ್ಚಿನ ಬೆಲೆದೊರೆತಲ್ಲಿ ಮಾತ್ರ ವಿಲೇವಾರಿಗೆ ಕ್ರಮ ತೆಗೆದುಕೊಳ್ಳಲಾಗುವುದು.
3. ಅನ್ವಿಯಿಸುವ ಮಾರಾಟ ತೆರಿಗೆ ಹಾಗೂ ಸರ್‌ಚಾರ್ಜ್‌ಗಳನ್ನು ಸಹ ನೀಡಬೇಕು.
4. ಹರಾಜಿನ ವಸ್ತುಗಳನ್ನು ನಿರ್ದೇಶಕರು, ಇವರ ಅನುಮತಿ ಪಡೆದ ನಂತರ ವಿಲೇವಾರಿ ಮಾಡಲಾಗುವುದು.
5. ಹರಾಜಿನ ಮೊಬಲಗನ್ನು ತಕ್ಷಣವೇ ಪಾವತಿ ಮಾಡಬೇಕು. ಹಣ ಪಾವತಿಯ ನಂತರವೇ ವಸ್ತುಗಳನ್ನು ವಿಲೇವಾರಿ ಮಾಡಲಾಗುವುದು.
6. ತೀರ ಕಡಿಮೆ ದರದಲ್ಲಿ ಹರಾಜಾದಲ್ಲಿ ಅಂತಹ ವಸ್ತುಗಳ ಹರಾಜನ್ನು ಪರಿಗಣಿಸುವುದಿಲ್ಲ.
7. ಅಂದರೆ ರೂ.5000.00 ನ್ನು (ಶೇಕಡಾ 10 ರಷ್ಟನ್ನು ಇ.ಎಂ.ಡಿ. ಯಾಗಿ ನೀಡತಕ್ಕದ್ದು.
8. ಹರಾಜನ್ನು ನಡೆಸುವ ಮುಂದೂಡುವ ಅಥವಾ ವಜಾಗೊಳಿಸುವ ಅಧಿಕಾರ ಪ್ರಾಚಾರ್ಯರದಾಗಿರುತ್ತದೆ.
9. ಅಂತಿಮ ತೀರ್ಮಾನ ನಿರ್ದೇಶಕರ ಪ್ರತಿನಿಧಿ: ಪ್ರಾಚಾರ್ಯರದಾಗಿರುತ್ತದೆ.
10. ಹರಾಜಿನ ವಸ್ತುಗಳನ್ನು ಸಂಸ್ಥೆಯ ಉಗ್ರಾಣದಲ್ಲಿ **ದಿನಾಂಕ:20.03.2007 ರಿಂದ 24.03.2007 ರವರೆಗೆ** ಪರಿಶೀಲಿಸಬಹುದಾಗಿದೆ.

**ಬಿ.ಎಸ್. ರಘುಪತಿ**

ಪ್ರಾಚಾರ್ಯರು,
ಕೈಗಾರಿಕಾ ತರಬೇತಿ ಸಂಸ್ಥೆ,
ತುಮಕೂರು ರಸ್ತೆ, ಬೆಂಗಳೂರು-22.

| ಕ್ರ.ಸಂ. | ವಿಲೇವಾರಿಗೆ ಇರುವ ವಸ್ತುಗಳ ವಿವರ | ಪರಿಮಾಣ |
|---|---|---|
| 1. | ಹೆಚ್‌ಎಸ್‌ಎಸ್ ಟೂಲ್ ಬಿಟ್ಸ್ ಟೈಲ್ ಬಿಟ್ಸ್ ಕೌಂಟರ್‌ಟೈಲ್ಸ್, ಡೈಮಂಡ್ ಡ್ರೆಸಸ್ಸ್ ಸ್ಕ್ರಾಪ್ | 5.15 ಕೆ.ಜಿ. |
| 2. | ಗ್ರೈಂಡಿಂಗ್ ವೀಲ್ ಡ್ರೆಸ್ಸಿಂಗ್ ಸ್ಟೇಕ್ | 127 ಸಂ. |
| 3. | ಹ್ಯಾಂಡ್ ಹ್ಯಾಕ್ಸ್ ಬ್ಲೇಡ್ : ಪವರ್ ಬ್ಲೇಡ್ ಸ್ಕ್ರಾಪ್ | 60.75 ಕೆ.ಜಿ. |
| 4. | ಸಿ. 'ಐ' ಸ್ಕ್ರಾಪ್ | 1166 ಕೆ.ಜಿ. |
| 5. | ಎಲೆಕ್ಟ್ರಿಕ್ ಪಿಟ್ಟಿಂಗ್ಸ್, ಸ್ವಿಚ್ಚಸ್‌ಫ್ಯೂಸಸ್ ಕ್ಯಾರಿಯರ್ಸ್, ಡಿ.ಪಿ. ಸ್ವಿಚ್ಚಸ್, ಎಸಿಡಿಸಿ ಸ್ವಿಚ್ಚಸ್, ಕ್ಯಾಂಟ್ಯಾಕ್ಟರ್ಸ್ ಸ್ಕ್ರಾಪ್ | 161 ಕೆ.ಜಿ. |
| 6. | ಫ್ಲೋಸ್ಡಾ ಲ್ಯಾಂಪ್ಸ್ : ಬಲ್ಬ್‌ಗಳು | 312 ಸಂಖ್ಯೆ |
| 7. | ಪ್ಲೋರೋಸೆಂಟ್ ಟ್ಯೂಬ್ಸ್ 2X4 | 371 |
| 8. | ವುಡ್ ಸ್ಕ್ರಾಪ್ | 44.1 ಕೆ.ಜಿ. |
| 9. | 'ವಿ' ಜಿಲ್ಪ್ ಹ್ಯಾಂಡ್ ಗ್ಲೋವ್ಸ್ | 159 |
| 10. | ಪಿ.ಪಿ.ಓ. ಸ್ಕ್ರಾಪ್ (ಹಚ್‌ಡಿಸಿಸಿ, ಹಾಸ ಪೈಪ್) | 22 ಕೆ.ಜಿ. |
| 11. | ಸೂಪರ್ ಎನಾಮಲ್ಡ್ ಕಾಪರ್ ವೈರ್ | 12.85 ಕೆ.ಜಿ. |
| 12. | ಪಿವಿಸಿ ಕಾಪರ್ ವೈರ್ ಸ್ಕ್ರಾಪ್ | 72.25 |
| 13. | ಎಂ.ಎಸ್. ಸ್ಕ್ರಾಪ್ | 8194.3 |
| 14. | ಚೇರಿಂಗ್ ಸ್ಕ್ರಾಪ್ | 01 ಸಂಖ್ಯೆ |
| 15. | ಅಲ್ಯೂಮಿನಿಯಂ ಸ್ಕ್ರಾಪ್ | 29 ಕೆ.ಜಿ. |
| 16. | ಜೆ.ಡಿ. ಸ್ಕ್ರಾಪ್ | 22.3 |
| 17. | ಬೇರ್ ಕಾಪರ್ ವೈರ್ ಸ್ಕ್ರಾಪ್ | 16.6 |
| 18. | ಆಟೋಮೊಬೈಲ್ ಸ್ಕ್ರಾಪ್ | 193-5 ಕೆ.ಜಿ |
| 19. | ಅಲ್ಯೂಮಿನಿಯಂ ವೈರ್ ಸ್ಕ್ರಾಪ್ | 13.5 |
| 20. | ಬ್ರಾಸ್ ಸ್ಕ್ರಾಪ್ | 10.6 |
| 21. | ಎಲೆಕ್ರಾನಿಕ್ ಸ್ಕ್ರಾಪ್ | 25 |
| 22. | ಟೈರ್ ಮತ್ತು ಟ್ಯೂಬ್ಸ್ | 29 ಸಂಖ್ಯೆ |
| 23. | ಬ್ಯಾಟರೀಸ್ ಸ್ಕ್ರಾಪ್ | 04 ಸಂಖ್ಯೆ |
| 24. | ಖಾಲಿ ಡ್ರಂಗಳು (210 ಲೀಟರ್ಸ್) | 06 |
| 25. | ಟಿ.ವಿ. ಅಸೆಂಬ್ಲಿ ಕಿಟ್ ಸ್ಕ್ರಾಪ್ | 03 |

**ಬಿ.ಎಸ್. ರಘುಪತಿ**
ಪ್ರಾಚಾರ್ಯರು,
ಕೈಗಾರಿಕಾ ತರಬೇತಿ ಸಂಸ್ಥೆ,
ತುಮಕೂರು ರಸ್ತೆ, ಬೆಂಗಳೂರು-22.

ಪಿ.ಆರ್.86

**FOREST, ENVIRONMENT AND ECOLOGY DEPARTMENT**
**STATE TENDER BULLETIN**
**No. FEE 24 IFA 2007, Bangalore, Dated:19th February, 2007**

It is hereby notified for the general information of the public that the sealed item rate Tender under two cover system (Technical bid and Financial bid) is invited by the Karnataka State Forest Industries Corporation limited, No.45, "A" New Timber Yard Layout, Mysore Road, Bangalore and as Tender Inviting Authority vide a Notification No. TEC.CR.PUR.TBR.2006-07, Dated:23.01.2007 from the reputed Timber Dealers/ Manufactures/ Authorised Dealers Registered under VAT act, for supply of various kinds of Swan Sizes, Planks, Veneers, P.F. Resin, Reversible Type Cast Iron Legs, Laminate, Plywood, Wood Preservative and Fevicol-SH etc. in the prescribed form in duplicate from suitable Technical, Financial and Managerial capabilities satisfying the conditions mentioned in the Tender document.

In the context, it is further notified for the general information of the public, the scheduled dates for Tenders is as notified here under:

**Issue of blank Tenders Forms:** **23.03.2007 upto 1.30 P.M.**

**Last Date for Receipt of Tender:** **23.03.2007 upto 3.00 P.M.**

**Opening of Tender :** **23.03.2007 at 4.00 P.M.**

All other time schedules terms and conditions already mentioned in the Notification No. TEC.CR.PUR.TBR.2006-07, Dated:23.01.2007 remain unchanged (copy enclosed).

**N. CHANDRAKUMAR**
State Tender Bulletin Officer and
Deputy Secretary & Internal Financial Adviser,
Forest, Environment and Ecology Department.

PR-94

**ಜಿಲ್ಲಾ ಸರ್ಜನರು, ಸರ್ಕಾರಿ ಜಿಲ್ಲಾ ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಜಿಮೆಆಶಿ: ಅಭಿವೃದ್ಧಿ: ಆಹಾರ: ಟೆಂಡರ್:1:06-07, ದಿನಾಂಕ:8ನೇ ಫೆಬ್ರವರಿ, 2007**

ಮೆಗ್ಗಾನ್ ಆಸ್ಪತ್ರೆಯ ಒಳರೋಗಿಗಳ ಉಪಯೋಗಕ್ಕೆ ದಿನಾಂಕ:01.04.2007 ರಿಂದ 31.03.2008 ರವರೆಗೆ ಉತ್ತಮವಾದ ಸೋನಾ ಮಸೂರಿ ಅಕ್ಕಿಯನ್ನು ಹಾಗೂ ಉತ್ತಮ ದರ್ಜೆಯ ಸಕ್ಕರೆಯನ್ನು ಸರಬರಾಜು ಮಾಡಲು ನಿಗದಿತ ನಮೂನೆಗಳಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ನಿಗದಿತ ನಮೂನೆಗಳನ್ನು ಪ್ರತಿ ಸೆಟ್ಟಿಗೆ 100-00 (ರೂಪಾಯಿ ನೂರು ಮತ್ತು ತೆರಿಗೆ ಮಾತ್ರ) ರೂ.ನಂತೆ ಪಾವತಿ ಮಾಡಿ ಕೆಲಸದ ದಿನಗಳಲ್ಲಿ ಮತ್ತು ಕೆಲಸದ ವೇಳೆಯಲ್ಲಿ ದಿನಾಂಕ:14.02.2007 ರಿಂದ 12.03.2007 ರವರೆಗೆ ಜಿಲ್ಲಾ ಸರ್ಜನರ ಕಛೇರಿಯಿಂದ ಪಡೆದುಕೊಳ್ಳಬಹುದು.

ಟೆಂಡರ್‌ಗಳನ್ನು ಸ್ವೀಕರಿಸಿದ ಕೊನೆಯ ದಿನಾಂಕ:14.03.2007 ರಂದು 12.00 ಗಂಟೆಯವರೆಗೆ ಹಾಗೂ ಅದೇ ದಿನ ಮಧ್ಯಾಹ್ನ 1.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮಕ್ಷಮ ಲಕೋಟೆಗಳನ್ನು ತೆರೆಯಲಾಗುವುದು. ಟೆಂಡರ್‌ನ ಒಟ್ಟು ಮೊತ್ತದ ಮೇಲೆ ಶೇ.5ರಷ್ಟು ಇ.ಎಂ.ಡಿ. ಹಣವನ್ನು ಡಿ.ಡಿ. ರೂಪದಲ್ಲಿ ಜಿಲ್ಲಾ ಸರ್ಜನರ ಹೆಸರಿನಲ್ಲಿ ಪಡೆದು ಲಗತ್ತಿಸತಕ್ಕದ್ದು. ಹೆಚ್ಚಿನ ವಿವರಗಳನ್ನು ಮೆಗ್ಗಾನ್ ಆಸ್ಪತ್ರೆಯ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಜಿಲ್ಲಾ ಸರ್ಜನರು,
ಸರ್ಕಾರಿ ಜಿಲ್ಲಾ ಮೆಗ್ಗಾನ್ ಆಸ್ಪತ್ರೆ,
ಶಿವಮೊಗ್ಗ.

ಪಿ.ಡಿ.20

**FORM- IV (See Rule-12)**

**NOTICE Dated:2nd February, 2007**

It is hereby notified that the undersigned has changed his name from **RUDRAYYA PARAYYA SAUNSHI** to **RUDRAYYA PARAYYA SAUNSHIMATH.**

PD-27 **RUDRAYYA PARAYYA SAUNSHI**

**FORM- IV (See Rule-12)**

**NOTICE Dated:17th January, 2007**

It is hereby notified that the undersigned has changed his name from **MARIYAPPA SHANKAR JOGADANDI** to **MARUTI SHANKAR JOGADANDAKAL.**

PD-28 **MARIYAPPA SHANKAR JOGADANDI**

**FORM-I**

**(See Rule 9)**

**OFFICE OF THE EXECUTIVE ENGINEER, NATIONAL HIGHWAY DIVISION, HUBLI**

**NOTIFICATION**

**Shri IRAPPA NINGAPPA DUNDANATTI,** Working as Work Inspector, N.H.Sub-Division, Belgaum, in the PWD Department of / Office of the Assistant Executive Engineer, National Highway Sub-Division, Belgaum is permited to change his name as **VEERANGAOUD NINGANGOUD PATIL.**

Executive Engineer,
National Highway Division, Hubli.

PD-29